# ಕರ್ನಾಟಕ ಲೋಚನ

ಸಂಪುಟ ೭ ಡಿಸೆಂಬರ್ ೧೯೯೪ ಸಂಚಿಕೆ ೨



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು-೫೬೦ ೦೧೯

# "ಕರ್ನಾಟಕ ಲೋಚನ"

## ಸಂಪಾದಕ ಮಂಡಲಿ



## ಲೇಖನಗಳು – ಟಿಪ್ಪಣಿಗಳು

ಸಂಶೋಧನಾತ್ಮಕ ಪಾಂಡಿತ್ಯ, ವಿದ್ವತ್‌ಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು – ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ, ಇವುಗಳಿಗೆ ಸಂಬಂಧಿಸಿದ ಟೀಕೆ–ಟಿಪ್ಪಣಿಗಳು– ಇವುಗಳಿಗೆ 'ಲೋಚನ' ಮೀಸಲಾಗಿದೆ.

ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಜವಾಬುದಾರರು ; ಅವು ಅವಶ್ಯವಾಗಿ ಪ್ರತಿಷ್ಠಾನದ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದು ತಿಳಿಯತಕ್ಕದ್ದಲ್ಲ.

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ವಾಕ್ಯವೃಂದದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾಗಿ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. 'ಲೋಚನ'ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಲೇಖನವನ್ನು ಹಿಂದಿರುಗಿಸಲಾಗದ್ದರಿಂದ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

# ಕರ್ನಾಟಕ ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

54, 3ನೇ ಕ್ರಾಸ್, ಗವೀಪುರ ವಿಸ್ತರಣ, ಬೆಂಗಳೂರು-560 019

ಸಂಪಾದಕರು : **ವಿದ್ವಾನ್ ಟಿ. ಕೇಶವ ಭಟ್ಟ**

ಸಹಾಯಕ ಸಂಪಾದಕರು : **ಎನ್. ಎಸ್. ರಾಮಸ್ವಾಮಿ ಅಯ್ಯರ್**

---

ಸಂಪುಟ ೭ ಡಿಸೆಂಬರ್ ೧೯೯೪ ಸಂಚಿಕೆ ೨

---

## ಪರಿವಿಡಿ



**ಟೀಕೆ-ಟಿಪ್ಪಣಿಗಳು**

# Karnataka Lochana

Half-Yearly Journal, Published by B. M. Sri Memorial Foundation, 54, 3rd Cross, Gavipuram Extension, Bangalore-560 019

Chairman; Editorial Board : *Shri. N. Basavaradhya*
Editor : *Vidwan V. Keshava Bhat*

*Vol. VII* *December 1993* *No. 2*


CONTENTS

# "ಸಮಸ್ಯಾಪೂರಣ"

ವಿದ್ವತ್ಪತ್ರಿಕೆಯಾಗಿರುವ ಈ "ಕರ್ನಾಟಕ ಲೋಚನ"ದಲ್ಲಿ ಸಂಪುಟ ೬, ಸಂಚಿಕೆ ೧ ರಿಂದ (ಜೂನ್ ೧೯೯೩) ಮೊದಲ್ಗೊಂಡು "ಸಮಸ್ಯಾಪೂರ್ತಿ" ಎಂಬ ಹೊಸ ಅಂಕಣವನ್ನು ಪ್ರಾಸ, ಪಾದಯುಕ್ತವಾದ ಛಂದೋಬದ್ಧ ಪದ್ಯರಚನೆಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಪ್ರಾರಂಭಿಸಲಾಗಿದೆ. ಪ್ರತಿ ಸಂಚಿಕೆಯಲ್ಲಿಯೂ ಮುಂದಿನ ಸಂಚಿಕೆಗಾಗಿ ಒಂದು ಸಮಸ್ಯೆಯನ್ನು ಸೂಚಿಸಲಾಗುವುದು. ಬಂದ ಸಮಸ್ಯಾಪೂರ್ತಿ ಪದ್ಯಗಳಲ್ಲಿ ಒಬ್ಬರ ಒಂದು ಪದ್ಯವನ್ನು ಮಾತ್ರ ಪ್ರಕಟಿಸಲಾಗುವುದು. ಈ ಅಂಕಣವು ಕನ್ನಡಕ್ಕೆ ಅತಿಶಯವೆನಿಸುವ ಛಂದೋಬದ್ಧ ಪದ್ಯರಚನೆಗೆ ಆಧುನಿಕ ಸಂದರ್ಭದಲ್ಲೂ ಅನುವಿತ್ತಂತೆ ಆಗುವುದೆಂದು ಭಾವಿಸಲಾಗಿದೆ.

—ಸಂ.

ಕಳೆದ ಸಂಚಿಕೆಯಲ್ಲಿ ನೀಡಿದ್ದ "ದನವಂ ಸಂಗೀತದಿಂದ ಸಲೆ ರಂಜಿಸಿದಂ" ಎಂಬ ಸಮಸ್ಯೆಗೆ ಬಂದಿರುವ ಸಮಸ್ಯಾಪೂರ್ತಿ ಪದ್ಯಗಳು.

1. ದನಿಯಂ ಕೂಡಿಸಿ ಮಧುರ
ಸ್ವನದಿಂ ಮನಮುಟ್ಟಿ ಪಾಡಿ ಸಹವಾದ್ಯಗಳಿಂ
ಘನ ಗಾಯಕ ಸಭೆಯ ಸ
ದನವಂ ಸಂಗೀತದಿಂದೆ ಸಲೆ ರಂಜಿಸಿದಂ

**ಗಮಕಿ. ಆರ್. ಶಂಕರನಾರಾಯಣ್**

2. ಘನಸಂಗೀತಜ್ಞಂ ಬುಧ
ಜನರಸಿಕಾನೀಕಮೆಸೆವ ಸಭೆಗಾಗಳೆ ಗಾ
ಯನ ಮೇಳ ಗೂಡಿ ನಡೆತಂ
ದನವಂ ಸಂಗೀತದಿಂದ ಸಲೆ ರಂಜಿಸಿದಂ

**ಟಿ. ಕೇಶವಭಟ್ಟ**

3. ಮಿನುಗಿರೆ ಪದಗಳ್ ರಾಗಂ
ಘನತರ ಭಾವದಲಿ ಬೆಳಗೆ ವೀಣಾನಿಪುಣಂ
ಒನಪಿಂ ಮೀಂಟುತೆ ರಸಿಕಸ
ದನವಂ ಸಂಗೀತದಿಂದೆ ಸಲೆರಂಜಿಸಿದಂ

**ಸಮೇತನಹಳ್ಳಿ ರಾಮರಾವ್**

4. ಧನದೊಳ್ ಮಾನಧನ ಬೆರೆತರೊಂದರೊಡನೊಂದು
ಮನದೊಳ್ ಮೂಡುವುದು ಹದಿಬದೆಯರಿಗೆ ನನಸುಗಳ್ ।
ತಣಿಪಲವರನಂಗವಿಷಯಾಸಕ್ತಾರವಿಂದವ
"ದನವಂ ಸಂಗೀತದಿಂದೆ ಸಲೆ ರಂಜಿಸಿದಂ" ॥

**ಸದ್ಯೋಜಾತಮೂರ್ತಿ**

5. ತನುಮನ ಜುಮ್ಮೆನೆ ಗೋವ ||
ರ್ಧನಗಿರಿಯಂ ಬೆರಳತುದಿಯಿನೆತ್ತಿದ ಗೋಪೀ ||
ಜನ ಹೃದಯಹಾರಿ ಗೋವಿಂ ||
ದನವಂ ಸಂಗೀತದಿಂದೆ ಸಲೆ ರಂಜಿಸಿದಂ ||

**ಪ್ರೊ. ಎಸ್. ಆರ್. ಮಳಗಿ**

6. ಘನನೀಲ ರುಚಿರ ರೂಪಂ
ದಿನದಂತ್ಯ ಸಮಯದೊಳ್ ಯಮುನೆಯ ನದಿ ದಡ*ದೊಳ್
ವನಿತಾಜನ ರಾಸಾನಂ
ದನವಂ ಸಂಗೀತದಿಂದೆ ಸಲೆ ರಂಜಿಸಿದಂ

**ಡಾ|| ಉಪ್ಪಂಗಳ ರಾಮಭಟ್ಟ**

7. ಘನಶಾರೀರದೆ ಸಿರಿಯೊ |
ಣ್ಮನ ನೆರೆ ನುತಿಸುತ ವಿರಿಂಚಿಸುತ ನಾರದನಾ ||
ಅನಿಮಿಷರೊಡೆಯನ ವನನಂ |
ದನವಂ ಸಂಗೀತದಿಂದೆ ಸಲೆರಂಜಿಸಿದಂ ||

**ಸೋಮಂಜೆ ಮಹಾಲಿಂಗಭಟ್ಟ**

8. ಅನುಪಮ ಗೀತಂ ಮುರಲಿಯ
ನಿನದಂ ಕೃಷ್ಣಂ ವಿಷಾಣವೇಣೂಲೋಲಂ
ಜನಮಂ ಕಾಳಿಂದೀತಟ
ದನಮಂ ಸಂಗೀತದಿಂದೆ ಸಲೆರಂಜಿಸಿದಂ ||

**ಶಶಿತನಯ**

---

* ಈ ಪದ ಅರಿಸಮಾಸವಾಗುತ್ತದೆ. ಹೀಗೆ ಬದಲಿಸಬಹುದೆಂದು ನಮ್ಮ ಅಭಿಪ್ರಾಯ
–ಳಿಸೆವ ಯಮುನಾತಟದೊಳ್ —ಸಂ.

ಟಿಪ್ಪಣಿ :

ಸಮಸ್ಯೆಯಲ್ಲಿ ಕೊಟ್ಟಿರುವ
'ದನವಂ' ಸರಿಯಲ್ಲ.
'ಜನ' 'ದನ' ಇವು ನಪುಂಸಕ ಶಬ್ದಗಳು.
'ದನಂ' ಎಂದು ಶಬ್ದ. 'ದನಂಗಾಹಿ' ಇತ್ಯಾದಿ
ಜ್ಞಾಪಿಸಿಕೊಳ್ಳುವುದು ಲೇಸು.

ಶಶಿತನಯ

'ದನವಂ' ಎಂಬಲ್ಲಿ ಕೊನೆಯ ಶಬ್ದವಾಗಿ ಅವಂ (ಅವನು) ಇರಲು ಸಾಧ್ಯವಿದೆ. ಮಂ (ಅವನು) ಎಂಬ ರೂಪ ಸರಿಯೇ ? ಅದಲ್ಲದೆ ಶ. ದ. 114ನೇ ಸೂತ್ರ ಮತ್ತು ಪ್ರಯೋಗ ಗಳನ್ನು ನೋಡಬಹುದು. ಅದರಂತೆ 'ದನವಂ' ಅಶುದ್ಧವಲ್ಲ.

ಈ ಪದ್ಯದಲ್ಲಿ 'ಕಾಳಿಂದೀತಟ ದನಮಂ' ಎಂಬ ಅರಿಸಮಾಸ ಪ್ರಯೋಗವಿದೆ. ಇದರ ಸಾಧುತ್ವದ ಬಗ್ಗೆ ಪ್ರಶ್ನಿಸಲು ಅವಕಾಶವಿದೆ. —ಸಂ.

9. ಅನುಪಮ ಗರಳಸ್ತನಿ ಪೂ-
ತನಿಯಸುವಂ ಪೀರ್ದು ಕಳೆದ ತುಟಿಯೊಳ್ ಕೊಳಲಂ
ನಿನದಿಸಿ ಲೋಕವ ಯದುನಂ-
ದನವಂ ಸಂಗೀತದಿಂದೆ ಸಲೆ ರಂಜಿಸಿದಂ ||

**ಅತ್ತೀಮುರುಡು ವಿಶ್ವೇಶ್ವರ**

10. ಜ್ಞಾನಿಗಳರಸನ ವಿಭವವ
ನಾನಾ ರಾಗಂಗಳಲ್ಲಿ ಪಾಡುತಲನಿಶಂ |
ಶ್ರೀನಿಧಿಯಂ ಗಾನಾನಂ
ದನವಂ ಸಂಗೀತದಿಂದೆ ಸಲೆ ರಂಜಿಸಿದಂ ||

**ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ**

11. ಮನಮೋಹಿಪ ಮುರಳೀ ವಾ
ದನವಂ ಕೇಳಲವತರಿಸಿದ ದೇವ ತರುಣೀ |
ಜನದಿಂದೊಪ್ಪಿದ ಭೂನಂ
ದನಮಂ ಸಂಗೀತದಿಂದೆ ಸಲೆ ರಂಜಿಸಿದಂ ||

**ಎಸ್. ಎಲ್. ಶ್ರೀನಿವಾಸಮೂರ್ತಿ**

**ಲೋಚನದ ಮುಂದಿನ ಸಂಚಿಕೆಗೆ ಸಮಸ್ಯೆ :**

"ಟಂಟಂಟ ಟಂಟಂಟ ಟಟಂಟ ಟಂಟ"

(ಭೋಜ ಪ್ರಬಂಧದಿಂದ)

ಸೂಚಿಸಿದವರು—ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ

## ತಿದ್ದುಪಡಿ

ಹಿಂದಿನ ಸಂಚಿಕೆಯಲ್ಲಿ ಮೊದಲನೆಯ ಸಮಸ್ಯಾಪೂರಣಕ್ಕೂ ಸಮಸ್ಯೆ ಪೂರಣ ಮಾಡಿದವರ ಹೆಸರಿಗೂ ನಡುವೆ ಅಚ್ಚಾಗಿರುವ (ಎಸ್. ಜಿ. ನರಸಿಂಹಾಚಾರ್ಯರ ಕವಿತೆ–ಪ್ರೇಮಿಕ ಪ್ರಿಯರ ಸಮಾಗಮ) ಎಂಬ ಭಾಗವನ್ನು ತೆಗೆದುಹಾಕಿ, ಪೂರಣಕ್ಕಾಗಿ ಕೊಟ್ಟಿರುವ ಸಮಸ್ಯೆಯ ಅಡಿಯಲ್ಲಿ (ಎಸ್. ಜಿ. ನರಸಿಂಹಾಚಾರ್ಯರ ಪ್ರೋಷಿತ ಪ್ರಿಯ ಸಮಾಗಮ ಎಂಬ ಕವಿತೆಯಿಂದ) ಎಂದು ಸೇರಿಸಿಕೊಳ್ಳಬೇಕಾಗಿ ವಿನಂತಿ.

**ಪ್ರೊ|| ಗರ್ಗೇಶ್ವರಿ ವೆಂಕಟಸುಬ್ಬಯ್ಯ**

## "ವೀರಶೈವ ಷಟ್ಸ್ಥಲ ಸಿದ್ಧಾಂತಂ" ಗ್ರಂಥಕರ್ತೃವನ್ನು ಕುರಿತು

—ಪ್ರೊ. ಸಿ. ಮಹಾದೇವಪ್ಪ

ಪ್ರಸ್ತುತ ಇಪ್ಪತ್ತನೆಯ ಶತಮಾನದ ಆದಿಯ ವೇಳೆಗೆ ಪ್ರಕಟಿತವಾದ "ವೀರಶೈವ ಷಟ್ಸ್ಥಲ ಸಿದ್ಧಾಂತಂ" ಎಂಬ ಗ್ರಂಥವು ಪ್ರಥಮತಃ ಎಳಂದೂರ ಶಾಸ್ತ್ರಿ ಸುಬ್ಬಣ್ಣನವರಿಂದ ಬೆಳಕು ಕಂಡಿತು. ಅದರಲ್ಲಿ ಅಷ್ಟಾವರಣ ಮಹತ್ವ, ಪಂಚಾಚಾರ ವರ್ತನೆಯ ಆಚರಣೆ ಮತ್ತು ಭಕ್ತಾದಿ ಧರ್ಮಾಚಾರ ವಿಚಾರಗಳನೊಳ್ಗೊಂಡ ಮೂರು ಪ್ರಕರಣಗಳಿವೆ. ಕ್ರಮವಾಗಿ ೩೭, ೪೯ ಮತ್ತು ೩೫ ಒಟ್ಟು ೧೨೧ ವಾರ್ಧಕ ಷಟ್ಪದಿಗಳನ್ನುಳ್ಳ ಈ ಪುಟ್ಟ ಸಿದ್ಧಾಂತ ಗ್ರಂಥದ ಪುನರ್ಮುದ್ರಣದ ಅಧಿಕಾರವನ್ನು ಪಡೆದು ಮುದ್ರಿಸಿದ ಪ್ರತಿಗಳು ಮುಗಿದುಹೋದ ಕಾರಣ ಮೈಸೂರು ಹೊಸಮಠದ ಚರಮೂರ್ತಿ ಬಸವಲಿಂಗ ಸ್ವಾಮಿಗಳು ತಾವು ಎರಡನೆ ಬಾರಿಗೆ 12-7-1923ರಲ್ಲಿ ಪ್ರಕಟಿಸಿದ ಗ್ರಂಥದ ಪ್ರಸ್ತಾವನೆಯಲ್ಲಿ "ಕೈ। ಯಳಂದೂರು ಶಾಸ್ತ್ರಿ ಸುಬ್ಬಣ್ಣನವರು ಈ ಗ್ರಂಥವು ಶ್ರೀಶಿವಯೋಗೀಶ್ವರರಿಂದ ವಿರಚಿತವಾದುದೆಂದು" ಮುದ್ರಿಸಿ ಪ್ರಕಟಿಸಿದ್ದರೆಂಬ ಅಂಶವನ್ನು ಪ್ರಸ್ತಾಪಿಸಿದ್ದಾರೆ.

1929ರಲ್ಲಿ ಪ್ರಕಟವಾದ ಮೂರನೆಯ ಸಂಪುಟದ ಪುಟ 161ರಲ್ಲಿ ಶಿವಯೋಗೀಶ್ವರ (ಸು. 1800) "ಇವನು ವೀರಶೈವ ಸಿದ್ಧಾಂತಸಾರ"ವನ್ನು ಬರೆದಿದ್ದಾನೆ. ಈತನು ವೀರಶೈವ ಕವಿ, ಚೆನ್ನವೀರಸ್ವಾಮಿಯ ಶಿಷ್ಯನು. ಸು 1800ರಲ್ಲಿ ಇದ್ದಿರಬಹುದು ಎಂದು ತಿಳಿಸಿ ಗ್ರಂಥದಿಂದ ಉದ್ಧರಿಸಿರುವ ಒಂದು ಪದ್ಯವಿದು:—

> ಹೆಪ್ಪಿನೊಳು ಹಾಲಡಗಿದಂತೆ ಯೊಂದಾನೊಂದು
> ನೆಪ್ಪಿನೊಳಗರಿವು ಮರವೆಗಳಡಗಿದಂತೆ ಕ
> ಣ್ಣಪ್ಪಿನೊಳು ಸೂರ್ಯಚಂದ್ರಾಗ್ನಿಪ್ರಕಾಶಂಗಳಡಗಿ ಕಾಣಿಸುವಂದದಿ ।
> ಮುಪ್ಪಿನೊಳು ಬಾಲ್ಯಯೌವನವಡಗಿದಂತಿರದೆ
> ಅರ್ಪಿತಮುಮುಮಪಧಾನ ಮುಖ್ಯ ಕ್ರಿಯೆಗಳನೆಲ್ಲ
> ನಿಷ್ಪತಿಯನೈದಿ ನಿಜವಾದ ಸದ್ಭಕ್ತರಿಗೆ ಭಾವಲಿಂಗಾಚಾರವು॥

ಪುನರ್ಮುದ್ರಣದ ಕ. ಕ. ಚ III (1974) ಪು 152. ಸಹ. ೨-೧೩

ಇದೇ 1929 (ಪು 456) ಹಾಗೂ 1974 (ಪು 156)ರ ಕ. ಕ. ಚರಿತೆಯ ಮೂರನೆ ಸಂಪುಟದಲ್ಲಿ ಮೈಲಾರ ಬಸವಲಿಂಗ ಶರಣರ ಬಗೆಗೆ ಇರುವ ಉಲ್ಲೇಖದ ಭಾಗವಿದು:—

ಮೈಲಾರದ ಬಸವಪ್ಪ ಸು. 1800. ಈತನುಗುಣರುಕರುತ್ರಿಪದಿ, ನಿರಾಭಾರಿ ವೀರಶೈವಸಿದ್ಧಾಂತ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಬಳ್ಳಾರಿಗೆ ಸೇರಿದ ಲಿಂಗನಾಯಕನಹಳ್ಳಿಯ ಚೆನ್ನವೀರಸ್ವಾಮಿಯ ಕರಜಾತನು; ಇವನ ಕಾಲವು 1800 ಆಗಬಹುದೆಂದು ಹೇಳುತ್ತಾರೆ.

'ನಿರಾಭಾರಿ ವೀರಶೈವ ಸಿದ್ಧಾಂತ'—ಇದು ಪ್ರಾಯಿಕವಾಗಿ ವಾರ್ಧಕ ಷಟ್ಪದಿ ಯಲ್ಲಿ ಬರೆದಿದೆ. ಪ್ರಕರಣ 3. ಪದ್ಯ 121. ಇವರಲ್ಲಿ ಅಷ್ಟಾವರಣ ಮಹತ್ವ, ಪಂಚಾ ಚಾರ ಮುಂತಾದ ವಿಷಯಗಳು ಹೇಳಿವೆ. ಇದರಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಗುರುವೆ ಅಜ್ಞಾನತಿಮಿರಾರ್ಕಭವಭಂಜನನು
ಗುರುವೆ ಭಕ್ತಿಜ್ಞಾನವೈರಾಗ್ಯಮಂದಿರನು
ಗುರುವೆ ದೀಕ್ಷಾ ಶಿಕ್ಷ ಮೋಕ್ಷ ಕಾರಣಕರ್ತೃವಲ್ಲದಿನ್ನೊರ್ವರಿಲ್ಲ ।
ಗುರುವಿನಿಂದಧಿಕ ದೈವಂಗಳಿಲ್ಲೆಂದರಿದು
ಹರನು 'ನಗುರೋರಧಿಕ ವಿದಿತ' ವೆಂದೋದಿದನು
ನಿರುತವಿದು ಕೇಳು ಸದ್ಗುರುವಧಿಕನಿಂತಪ್ಪ ಗುರುಕರೋದ್ಭವರಧಿಕರು॥

[೧—೩]

ಪರಸತಿಗೆ ಪರಧನಕೆ ಪರನಿಂದೆ ಪರದೈವ
ಕೆರಗಿಯನ್ಯರ ಜೀವಹಿಂಸೆಗಳ ಮಾಡುವುದು
ದುರಿತಂ ಮಹತ್ಪಾತಕವಿದೆಂದು ಗುರುಮುಖದೊಳರಿದವಕ್ಕಿಚ್ಛೈಸದೇ ।
ಗುರುಕರಾಂಬುಜದೊಳೊಗೆದಮಳೇಷ್ಟಲಿಂಗವನು
ಸರಸ ಸಂಯೋಗ ಸಮರಸಭಾವದಿಂದಪ್ಪಿ
ಹೆರಹಿಂಗದಂತಿಪ್ಪ ನೈಷ್ಠೆ ಸದ್ವೀರಮಾಹೇಶ್ವರ ಸದಾಚಾರವು ॥

[೨—೧೮]

ಕವಿಚರಿತೆಕಾರರಿಂದ ಉದ್ಧೃತವಾದ ಈ ಮೂರು ಷಟ್ಪದಿಗಳೂ ಮೈಸೂರು ಹೊಸಮಠದ 1923ರ ಪುನರ್ಮುದ್ರಿತ "ವೀರಶೈವ ಷಟ್ಸ್ಥಲ ಸಿದ್ಧಾಂತಂ" ಗ್ರಂಥದಲ್ಲಿ ರುವ ಪದ್ಯಗಳೇ ಆಗಿವೆ. ಮೊದಲೆರಡು ಪ್ರಕರಣಗಳಿಂದ ಮಾತ್ರ ಆರಿಸಿದ ಈ ಪದ್ಯಗಳ ಸಂಖ್ಯೆ ಕ್ರಮವಾಗಿ ೨—೧೩ ಮತ್ತು ೧—೩, ೨—೧೮ ಆಗಿರುವುದನ್ನು ಆಯಾ ಕವಿಗಳ ಎಂದರೆ ಶಿವಯೋಗೀಶ್ವರ (ಸು. 1800) ಹಾಗೂ ಮೈಲಾರದ ಬಸವಪ್ಪ (ಸು. 1800) —ಇವರ ಕೃತಿಗಳಲ್ಲಿನ ಪದ್ಯವೆಂದು ಸೂಚಿಸಿ, ಉದ್ಧೃತಗೊಂಡ ಷಟ್ಪದಿಗಳಿಂದಲೇ ತಿಳಿಯಬಹುದಾಗಿದೆ. 'ವೀರಶೈವಷಟ್ಸ್ಥಲ ಸಿದ್ಧಾಂತ'ವೆಂಬ ಪ್ರಸ್ತುತ ಸಮಗ್ರ ಗ್ರಂಥದ ಹೆಸರು ಬೇರೆ ಬೇರೆ ಪ್ರದೇಶಗಳಲ್ಲಿ (1) 'ವೀರಶೈವ ಷಟ್ಸ್ಥಲ ಸಿದ್ಧಾಂತಸಾರ' ವೆಂದೂ (2) 'ನಿರಾಭಾರಿ ವೀರಶೈವ ಸಿದ್ಧಾಂತ'ವೆಂದೂ, 'ಷಟ್‌ಸ್ಥಲ ನಿರಾಭಾರಿ ವೀರಶೈವ ಸಿದ್ಧಾಂತ'ವೆಂದೂ ಪ್ರಚುರ ಗೊಂಡಿರುವಂತೆ ವ್ಯಕ್ತವಾಗುವುದು.

ಎಳಂದೂರು ಶಾಸ್ತ್ರಿ ಸುಬ್ಬಣ್ಣನವರು "ಈ ಗ್ರಂಥವು ಶ್ರೀ ಚನ್ನವೀರಸ್ವಾಮಿ ಕರಕಂಜಸಂಜಾತರಾದ ಶಿವಯೋಗೀಶ್ವರರಿಂದ ವಿರಚಿತವಾದುದೆಂದು ಮುದ್ರಿಸಿ ಪ್ರಕಟಿಸಿದ್ದರು" ಎಂಬ ವಿಚಾರವನ್ನು ಶ್ರೀಬಸವಲಿಂಗಸ್ವಾಮಿಗಳವರು ಗ್ರಂಥದ ತಮ್ಮ ಪ್ರಸ್ತಾವನೆಯಲ್ಲಿ ಓದುಗರ ಗಮನಕ್ಕೆ ತಂದಿದ್ದಾರೆ.

ಕವಿಚರಿತೆಕಾರರು ಇಡೀ ಸಮಗ್ರಗ್ರಂಥವನ್ನು ನೋಡಿದ್ದುದಕ್ಕೆ ಪ್ರಮಾಣ ಅವರ ಹೇಳಿಕೆಯೇ ಆಧಾರ. ಗ್ರಂಥ ಪ್ರಕರಣ 3, ಪದ್ಯ 121 ಎಂದು ಸ್ಪಷ್ಟಪಡಿಸಿದ್ದಾರೆ. ಶಿವಯೋಗೀಶ್ವರರ ಗ್ರಂಥದ ಹೆಸರು "ವೀರಶೈವ ಷಟ್ಸ್ಥಲ ಸಿದ್ಧಾಂತ ಸಾರ" ವೆಂದೂ ಮೈಲಾರದ ಬಸವಪ್ಪನವರ ಕೃತಿಗಳನ್ನೂ ಹೆಸರಿಸುವಾಗ "ನಿರಾಭಾರಿ ವೀರಶೈವ ಸಿದ್ಧಾಂತ"ವೆಂದೂ ಹಣೆಹೆಸರಿನಲ್ಲಿ ಮಾರ್ಪಾಟು ಅಲ್ಪಸ್ವಲ್ಪ ಆಗಿರುವುದಾದರೂ ನಿರೂಪಿತ ವಸ್ತು, ಪದ್ಯರಚನೆ ಒಂದೇ ಆಗಿರುವುದು ಕವಿಚರಿತೆಕಾರರ ಗಮನಕ್ಕೆ ಬಂದಿಲ್ಲದೇ ಇಲ್ಲ ಎಂಬುದಕ್ಕೆ ಆ ಗ್ರಂಥವಸ್ತುವಿನ ಅವರ ವಿವರಣೆಯು ಸಾಮ್ಯವೇ ನಿದರ್ಶನ. ಶಿವಯೋಗೀಶ್ವರ (ಸು. 1800) ಹಾಗೂ ಮೈಲಾರದ ಬಸವಪ್ಪ (ಸು. 1800)—ಈ ಉಭಯರ ಕೃತಿ ನಾಮದಲ್ಲಿ ಅಲ್ಪ ಮಾರ್ಪಾಟಿದ್ದರೂ ಗ್ರಂಥಸ್ಥ ಪದ್ಯಗಳಲ್ಲಿ ಏನೊಂದೂ ಗಣನೀಯ ವ್ಯತ್ಯಾಸವಿಲ್ಲವೆಂಬುದರ ಕಡೆಗೆ ಓದುಗರ ಗಮನ ವನ್ನು ಸೆಳೆಯದೆ ಅವರಿಬ್ಬರ ಕೃತಿಗಳೂ ಬೇರೆ ಬೇರೆ ಗ್ರಂಥಗಳೆಂಬ ಭಾವನೆ ಮೂಡು ವಂತೆ ಅವಕಾಶ ಮಾಡಿರುವುದೊಂದು ಸೋಜಿಗವೇ ಸರಿ. ಕವಿಚರಿತೆಗೆ ಕೃತಿಕರ್ತರು ಇಟ್ಟ ದೃಷ್ಟಿಯು ಬಟ್ಟೆಯೋ ಎಂಬಂತೆ, ವಸ್ತುಸ್ಥಿತಿಯು ಸತ್ಯವನ್ನು ಪ್ರಕಟಿಸದೆ ಹೋಗಿ ಮರೆಮಾಚಿಸಿದ ದೋಷವನ್ನು ಮುಚ್ಚುವುದೂ ಸಂಶೋಧಕನ ಲೋಪಗಳಲ್ಲಿ ಒಂದಾದೀತು. ಕನ್ನಡ ಪರಿಷತ್ತಿನ ಮುಂದಿನ ಮುದ್ರಣದಲ್ಲಿ ಈ ಲೋಪವನ್ನು ಹೋಗ ಲಾಡಿಸಲು ಅವಕಾಶವನ್ನು ಈ ಲೇಖನ ಒದಗಿಸಿದೆ ಎಂಬುದರಲ್ಲಿ ಸಂದೇಹವಿಲ್ಲ.

'ವೀರಶೈವ ಷಟ್ಸ್ಥಲ ಸಿದ್ಧಾಂತ' ಗ್ರಂಥದ ಕರ್ತೃ ವಾಸ್ತವವಾಗಿ ತನ್ನ ಗುರುವನ್ನು 'ಚೆನ್ನವೀರ ಮದ್ಗುರು', 'ಚೆನ್ನಸದ್ಗುರು', 'ಷಟ್ಸ್ಥಲದೀಶ ಸಾರ್ವಭೌಮ' ಚೆನ್ನವೀರ ಮದ್ಗುರು (೨–೪೯) "ಶೈವಾಚಾರವರ್ತನೆಯನತಿಗಳೆದು ನಿರುತದಿಂ ವೀರಶೈವ ಪ್ರತಿಷ್ಠೆಯ ಮಾಳ್ಪ ಶರಣರೇ ಶ್ರೇಷ್ಠರೆಂದೆನಿಸಿದ '**ಮದ್ಗುರುಚನ್ನವೀರ**' ಪಾದಸ ಗೆಮ್ಮನು (೩–೩೫) ಎಂದು ಕರೆದಿರುವಲ್ಲಿ ಚನ್ನವೀರ 'ಗುರು' ವೆಂದಿದ್ದಲ್ಲಿಯೆ ಗ್ರಂಥದಲ್ಲಿ ಎಲ್ಲಿಯೂ '**ಹಾಲವರ್ತಿ** ಚನ್ನವೀರಸ್ವಾಮಿ' ಎಂದಾಗಲಿ "ಚೆನ್ನವೀರ ಮದ್ಗುರುದಾಸ **ಗೋವಿಂದ**" (ವೈರಾಗ್ಯದಲರು : ಪು. ೨೩೮) ಎಂದಾಗಲಿ ಕರೆದಿರು ವುದನ್ನು ವಾಚಕರು ನಿರೀಕ್ಷಿಸುವಂತಿಲ್ಲ. ಆ ಕಾರಣ ಈ ಚನ್ನವೀರಗುರು ಬೇರೆ ಇರ ಬಹುದು ಎಂಬುದರ ವಿವೇಚನೆ ಈ ಲೇಖನದ ಉದ್ದೇಶ. ಪ್ರಾಸಂಗಿಕವಾಗಿ ಗ್ರಂಥ ರಚನೆಯ ಕಾಲದ ಬಗೆಗೆ ಗಣಿಸಬಹುದಾದ ಒಂದು ಅಂಶವೆಂದರೆ ಸಾಮಾನ್ಯ ಹಾಗೂ ಶಕಟರೇಫಗಳ ಬಳಕೆ. ಕವಿ ಪ್ರಾಸಸ್ಥಾನದಲ್ಲಿ ರೇಫ (ರ) ಹಾಗೂ ಶಕಟ ರೇಫ (ಱ)

ಗಳನ್ನುಳ್ಳ ಪದಗಳನ್ನು ಮಿಶ್ರಗೊಳಿಸಿರುವುದನ್ನು (೨–೧೮ ಇತ್ಯಾದಿ) ನೋಡಿದರೆ 17ನೇ ಶತಮಾನಕ್ಕೆ ಹಿಂದಿನ ಕಾಲಕ್ಕೆ ಸೇರಿದ ಗ್ರಂಥವಲ್ಲವೆಂದು ಸ್ಥೂಲವಾಗಿ ಗ್ರಹಿಸಬಹುದು.

"ವೀರಶೈವಾಚಾರ ಕೌಸ್ತುಭ" (ಸಂಸ್ಕೃತ ಗ್ರಂಥ)ದ ಕರ್ತೃ ಮೌನಪ್ಪ ಪಂಡಿತನು ವೀರಶೈವ ದೀಕ್ಷಾಗುರು ಚನ್ನವೀರಸ್ವಾಮಿಯ ಕರಕಮಲಸಂಜಾತನೆಂದು ತನ್ನನ್ನು ಕರೆದುಕೊಂಡಿದ್ದಾನೆ. ಆ ಚನ್ನವೀರಸ್ವಾಮಿಯಾದರೋ ಅನಾದಿ ಪ್ರಮಥ ಪರಂಪರಾಗತ ಷಟ್ಸ್ಥಲಜ್ಞಾನ ಬೋಧಕಾಚಾರ್ಯವರ ಗುರುಬಸವ ಯತಿವರನ ಶಿಷ್ಯನೆಂದೂ ಆ ಗ್ರಂಥಕರ್ತನಿಂದಲೇ ತಿಳಿದುಬರುತ್ತದೆ. ಹಾಲವರ್ತಿ ಚನ್ನವೀರ ಸ್ವಾಮಿಯ ಶಿಷ್ಯವರ್ಗದವರಲ್ಲಿ ಮೌನಪ್ಪ ಪಂಡಿತನ ಹೆಸರಿರುವಂತೆ ತೋರದು.

ತೋಂಟದ ಸಿದ್ಧಲಿಂಗೇಶ್ವರರ ಗುರುಪರಂಪರೆಯಲ್ಲಿ ಹರದನಹಳ್ಳಿ ಗೋಸಲ ದೇವರ ಗುರು 'ಚೆನ್ನವೀರೇಶ್ವರ ದೇವರು' ಒಬ್ಬರಾದರೆ ಮತ್ತೊಬ್ಬ ಚೆನ್ನವೀರಗುರುವೆಂದರೆ ತೋಂಟದ ಸಿದ್ಧಲಿಂಗದೇವರು ಮುಖ್ಯವಾದ ಮಹಾನುಭಾವರ ಬೋಧಾಮೃತ ಸಂತುಷ್ಟ, ಸಕಲಕರಣನಿರ್ಮುಕ್ತ, ವಿಷಯವಿರಕ್ತ ವೀರಮಾಹೇಶ್ವರಾಚಾರ ಸಂಪನ್ನನಪ್ಪ ಚೆನ್ನವೀರಾಚಾರ್ಯರು. ಇವರು ಅಖಿಲಪುರಾತನರ ವಚನಗಳನ್ನು ಸ್ಥಲ ಪರ್ಯಾಯಗಳಿಂದ ಸೂತ್ರವಿಟ್ಟು ಸಂಗ್ರಹಿಸಿ ಅರ್ಥೈಸಿ ಶಿವಲಿಂಗದೇವನೆಂಬ ಶಿಷ್ಯನಿಗೆ ಬೋಧಿಸಿದ ಶಿವಲಿಂಗೈಕ್ಯ ನಿರ್ಣಯವೇ 'ವಿಶೇಷಾನುಭವ ಷಟ್ಸ್ಥಲ'ವೆಂಬ ವಚನ ಸಂಕಲನ ಗ್ರಂಥವು. 'ಶಾಂತಲಿಂಗದೇಶಿಕೇಂದ್ರನು ಮೊದಲಿಟ್ಟಂತಹ ಶಾಸ್ತ್ರವನ್ನು ಟೀಕಿನ ಗುರುಪಾದ ದೇವರು ಸಮಾಪ್ತವೆಂದು ಮುಗಿಸಿದರು'—(ಕ.ವಿ. ಪ್ರಕಟನೆ ಪು. ೪೧೮) ಎಂಬ ಲಿಪಿಕಾರರ ಸಮಾಪ್ತಿವಾಕ್ಯದಿಂದ ಶಾಂತಲಿಂಗದೇಶಿಕೇಂದ್ರನು ಮೊದಲು ಪ್ರಾರಂಭಿಸಿದಂತಹ ಈ ಶಾಸ್ತ್ರಗ್ರಂಥವನ್ನು ಟೀಕಿನ ಗುರುಪಾದದೇವರು ಮುಗಿಸಿದರೆಂದು ತಿಳಿದುಬರುತ್ತದೆ. ಈ ಸಂಕಲನಗ್ರಂಥಕಾರನಾದ ಚೆನ್ನವೀರಾಚಾರ್ಯನಿಗಿಂತ ಶಾಂತಲಿಂಗದೇಶಿಕೇಂದ್ರನು ಆ ಅನಂತರದವನೆಂಬುದು ಸುಸ್ಪಷ್ಟವಿದೆ. ಭೈರವೇಶ್ವರ ಕಥಾಸೂತ್ರ ರತ್ನಾಕರವನ್ನು ರಚಿಸಿದ ಶಾಂತಲಿಂಗದೇಶಿಕನೊಬ್ಬ (1672) ಲಿಪಿಕಾರನೋ ಏನೋ ತಿಳಿಯದು.

ಇನ್ನೊಬ್ಬ "ಚೆನ್ನವೀರ" (ಸು. 1500) ಸಾರಸ್ವತ ವ್ಯಾಕರಣ, ಪುರುಷಸೂಕ್ತ, ನಮಕಚಮಕಗಳಿಗಲ್ಲದೆ ವೀರಮಾಹೇಶ್ವರ ತಂತ್ರಕ್ಕೆ ಟೀಕೆಯನ್ನು ಬರೆದಿರುವ ಈತನು 'ಕಾಶೀಕಾಂಡ ಚೆನ್ನವೀರಕವಿ' ಎಂದೇ ಪ್ರಸಿದ್ಧನಾದವನು. ವೀ. ಷ. ಸಿದ್ಧಾಂತದ ಕರ್ತೃವು ಸ್ತುತಿಸಿರುವ, 'ಗುರು ಚನ್ನವೀರ'ನಿಗಿಂತ ಈತ ಭಿನ್ನ ವ್ಯಕ್ತಿಯೆಂದು ತೋರುತ್ತದೆ.

ಮತ್ತೊಬ್ಬ 'ಚನ್ನವೀರ ಗುರು'ವೆಂಬವರು ಗರಳಪುರವೆಂದೂ, ತೃಣಬಿಂದು ಪಟ್ಟಣವೆಂದೂ ಹೆಸರಾದ ನಂಜನಗೂಡು ತಾಲ್ಲೂಕ್ ಹುಲ್ಲಹಳ್ಳಿಯಲ್ಲಿ ಸು. ಕ್ರಿ.ಶ. 1650ರಲ್ಲಿದ್ದ

ವೀರಶೈವರ್ಗೆಯಾಚರಣಾಚಾರ ಮಹಾಪ್ರಬಂಧವಾದ ಅಷ್ಟಾವರಣಮಣಿದರ್ಪಣ ಶತಕ, ಈಶ್ವರವೋಲಗ ಶತಕ—ಎಂಬ ಬೇರೆ ಬೇರೆ ಎರಡು ಶತಕಗಳನ್ನು ರಚಿಸಿದ ಚನ್ನವೀರ ದೇಶಿಕ[1]. ಈತನು ಶಿವಲಿಂಗದೇವನ ಪೌತ್ರ, ವೀರಣಾರ್ಯರ ಪುತ್ರ. ಈತನ ಮಗನೇ ಪಂಡಿತ ವಂಶದ ಶಾಂತವೀರ ದೇಶಿಕನು. ಈತನು ರಚಿಸಿರುವ ಶಿವಲಿಂಗ ಚಾರಿತ್ರವೆಂಬ ಚಂಪೂ ಕಾವ್ಯದಲ್ಲಿ [2] ಚನ್ನವೀರ ಗುರುವಿನ ವೃತ್ತಾಂತವಿದೆ:—

ಆನಂದಾಗಮವೇದ ಶಂಕರಪುರಾಣಾರ್ಥಜ್ಞ ಸತ್ಶ್ಲೋಕವಿದಂ
ನಾನಾ ಕಾವ್ಯವಿಚಾರಪೂರ ಕವಿತಾ ಕರ್ಣಾಟಚಕ್ರೇಶ್ವರಂ
ಗಾನಪ್ರೀಯಗಭೀರವಾರ್ಧಿಗುರುವಂಶೋದ್ಧಾರ ಚನ್ನಾರ್ಯಕಂ
ನಾನೀ ಕಾವ್ಯವನಳ್ತಿಯಿಂದೊರೆವೆ ಕೇಳ್ ನಿಮ್ಮಂಘ್ರಿಕಾರುಣ್ಯದೊಳ್ ॥

೧–೭

ಎಂದು ಶಾಂತವೀರೇಶ್ವರನು ತಂದೆಯಾದ ಗುರುವಂಶೋದ್ಧಾರ ಚನ್ನಾರ್ಯನ ಕೃಪೆಯಿಂದ ತನ್ನ ಈ ಶಿವಲಿಂಗಚಾರಿತ್ರ್ಯವನ್ನು ರಚಿಸಿದಂತೆ ತಿಳಿಸಿದ್ದಾನೆ.

ಈ ಶಾಂತವೀರ ದೇಶಿಕನ ತಂದೆ ಚೆನ್ನವೀರದೇಶಿಕನೂ, ಸಕಲ ಪುರಾತನ ಗೀತಕೆ ಸೂಚನಾರ್ಥ ಪದಂಗಳನ್ನು ನಿಯಾಮಿಸಿಯೂ ಅವುಗಳಿಂದ ಸ್ಥಲವಿಟ್ಟು ಸಂಗ್ರಹಿಸಿಯೂ ಪ್ರೇಮದಿಂದ ಶಿವಲಿಂಗ ದೇವರಿಗೆ ತಿಳಿಯ ಹೇಳಿದ ಶಿವಯೋಗ ಪ್ರದೀಪಿಕೆಯ ಕರ್ತೃವಾದ ದೇಶಿಕ ಚನ್ನವೀರಾರ್ಯನೂ ಒಬ್ಬನೇ ಎಂದು ಗ್ರಂಥಾಂತರಗಳ ಆಧಾರದಿಂದ ತಿಳಿಯಲು ಅವಕಾಶವಿದೆ ಎಂಬುದಕ್ಕೆ ನೋಡಿ :–

ಶ್ರೀ ಮದ್ದೇಶಿಕ ಚನವೀರಾರ್ಯರು
ಆ ಮಹ ಸಕಲ ಪುರಾತನ ಗೀತಕೆ
ನೇಮಿಸಿಯು ಸೂಚನಾರ್ಥಪದಂಗಳನವರಿಂ ಸ್ಥಲವಿಟ್ಟು 1
ಈ ಮಹಿಯೊಳು ಪೊಸತೆನೆ ಸಂಗ್ರಹಿಸಿಯು
ಪ್ರೇಮದಿ ಶಿವಲಿಂಗ ದೇವಂಗೊರೆದನು
ನಾಮವಿದರ ಶಿವಯೋಗ ಪ್ರದೀಪಿಕೆ ಶರಣರು ಅವಧರಿಸಿ॥ [3]

ಶಿವಯೋಗ ಪ್ರದೀಪಿಕೆ ಗ್ರಂಥದ ವಿಷಯದ ಬಗೆಗೆ ಬರೆದಿರುವ ಷಟ್ಪದಿಯಿದು.

ಬೆಂಗಳೂರಿನ ಒಡೆಯ ಕೆಂಪೇಗೌಡನಿಂದ ಸನ್ಮಾನಿತನಾದ ಗುರು ವೀರಣಾರ್ಯನೂ

---

1. ನೋ : ಪೀಠಿಕೆ–ಚಂದ್ರಕವಿ ವಿರಚಿತ ಶಂಕರಶತಕ : ಸಂ. ಪ್ರೊ. ಸಿ. ಮಹಾದೇವಪ್ಪ.
2. ಶಿವಲಿಂಗಚಾರಿತ್ರ=ಸಂ. ಆಸ್ಥಾನ್ ವಿದ್ವಾನ್ ಶ್ರೀ. ಎಂ. ಜಿ. ನಂಜುಂಡಾರಾಧ್ಯರು: ಶ್ರೀ ಶೈಲ ಜಗದ್ಗುರು ಸಿಡುಮೂಮಿಡಿ ಗ್ರಂಥ ಭಂಡಾರ, ಬಸವನಗುಡಿ, ಬೆಂಗಳೂರು–೪.
3. ನೋ : ಸದ್ಧರ್ಮದೀಪಿಕೆ—ಸಂಚಿಕೆ, 54–55. (1946) ಪುಟ ೧.

ಆತನ ಮಗನಾದ ಚನ್ನವೀರಾರ್ಯನೂ ಶಿವಪ್ರೇರಣೆಯಿಂದ ಭಕ್ತಿಕಾಯಕದಲ್ಲಿ ನಿರತರಾದವರು. ಸದಾಚಾರ ಸಂಪನ್ನತೆಯಿಂದ ಭಸ್ಮರುದ್ರಾಕ್ಷ, ಸದ್ವಸ್ತ್ರಭೂಷಿತರಾಗಿ ದಂಡಿಗೆಯನ್ನು ಹಿಡಿದು–ಕಾಯಕ ಕೋರಿ–ಮೀಟುತ್ತ ಪುರಾತನರ ವಚನಗಳನ್ನು ಹಾಡುತ್ತ ಭಕ್ತವೃಂದವನ್ನು ತಣಿಸುತ್ತಿದ್ದ ಬಗೆ :

> ದೇವ ಹರೀಶ ದೇವ ಗುರುಶಂಕರದೇವ ಗುಹೇಶ್ವರಾರ್ಯಕಾ
> ದೇವ ಪದಾರ್ಚನಾ ನಿಜಗುಣಾಹ್ವಯ ವೀರಣನಾಗಿದೇವ ಮು
> ಖ್ದೇವ ಪುರಾತನೋಕ್ತಿ ವಚನಂಗಳ ನೋದುತೆ ವೀರಣಾರ್ಯಕಂ
> ದೇವ ಮಹೇಶ ಭಕ್ತಜನರಂ ಮಿಗೆ ಕೇಳಿಪನುತ್ಸವಂಗಳೊಳ್ ॥
>
> ಶಿವಲಿಂಗ ಚಾರಿತ್ರ : ೨–೪೮.

ಚನ್ನವೀರಾಚಾರ್ಯನು ಹೀಗೆ ಶಿವಾರ್ಚಕರ ಮನೆಗೈದಿ ಹರಿಹರದೇವ, ಗುರುಶಂಕರದೇವ, ಗುಹೇಶ್ವರ, ನಿಜಗುಣವೀರಣ, ನಾಗಿದೇವ ಮೊದಲಾದ ಪುರಾತನರ ವಚನಗಳನ್ನು ದಂಡಿಗೆಯ ಮೀಟುದನಿಯೊಡನೆ ಹಾಡಿ ನಲಿದು ನಲಿಸುತ್ತಲಿದ್ದನೆಂಬುದಷ್ಟೇ ಅಲ್ಲದೆ ದೇವಮಂದಿರಗಳಲ್ಲಿ ಹುಲ್ಲಳ್ಳಿಯ ವೀರರಾಜೇಂದ್ರ, ಹದಿನಾಡ ಉಯ್ಯಂಬಳ್ಳಿಯ ಶಿವಪೂಜೆಯರಸರ ಆಸ್ಥಾನಗಳಲ್ಲಿ ವಿದ್ಯಾಪ್ರವೀಣನೂ, ಗಾನದ ಗರುವನೂ, ಗಮಕಿಗಳ ಅರಸನೂ, ಸರಸಸಂಗೀತರಸಾಂಭೋನಿಧಿ ಪೂರ್ಣಚಂದ್ರನೂ ಆದ ವೀರಣಾರಾಧ್ಯನಂತೆ ತಾನೂ ವೀರೇಂದ್ರನ ಆಸ್ಥಾನವಲ್ಲಿಯೂ, ಕೊಡನಾಲತ್ತೂರ ಶಂಭುಲಿಂಗೇಗೌಡರ ಆಲಯದಲ್ಲಿಯೂ, ಹುಣಿಸಿನ ಹಾಳೆ (ಹೆಗ್ಗಡದೇವನಕೋಟೆ ತಾಲ್ಲೂಕ್ ಹುಣಸಹಳ್ಳಿ?) ಒಡೆಯ ನಂಜರಾಜೇಂದ್ರನ ಅರಮನೆಯಲ್ಲಿ ಒಮ್ಮೆ ಓದಿದ ಪುರಾತನ ವಚನವನ್ನು ಮತ್ತೊಮ್ಮೆ ಪುನರುಕ್ತಿಮಾಡದೆ ಒಂದುಮಾಸಪರ್ಯಂತ ಪುರಾತನರ ವಚನಗಳನ್ನು ಹಾಡುವ ಮೂಲಕ ರಾಜಮನ್ನಣೆಗೂ ಗೌರವಕ್ಕೂ ಪಾತ್ರನಾಗಿದ್ದನು. ಕ್ರಿ. ಶ. 1617ರಿಂದ 1637ರವರೆಗೆ ಆಳಿದ ಚಾಮರಾಜೇಂದ್ರನ ಆಸ್ಥಾನದಲ್ಲಿ ರಾಮದೀಕ್ಷಿತನನ್ನು ಸೋಲಿಸಿದ ತಂದೆಯಾದ ಚೆನ್ನಾರ್ಯನು ರಕ್ಷಿಸಲೆಂದು ಪ್ರಾರ್ಥಿಸಿರುವ ಶಾಂತವೀರದೇಶಿಕನ ಮಾತಿನಿಂದ ಚೆನ್ನವೀರಾರ್ಯನು ತರ್ಕದಲ್ಲಿ ಘನ ಪಾಂಡಿತ್ಯವನ್ನು ಹೊಂದಿದ್ದನೆನ್ನಬಹುದು. "ವಿಚಾರಪೂರ ಕವಿತಾ ಕರ್ಣಾಟಚಕ್ರೇಶ್ವರ" ನೆಂದು ಖ್ಯಾತನಾದ ಈ ಚನ್ನವೀರನೂ ತೆಲುಗಾಣ್ಯದ ಶಿವಲಿಂಗದೇವನಿಗೆ ಹೇಳಿದ ಶಿವಯೋಗ ಪ್ರದೀಪಿಕೆಯಲ್ಲಿ ಹೊಗಳುವ "ಗುರುಚನ್ನವೀರೇಂದ್ರನೂ" ಒಬ್ಬನೇ ಎಂದು ಹೇಳಲು "ಹಿಂದು ಪುರಾತರ" ಹಾಗೂ ನೂರೊಂದು ವಿರತರ ಹಾಡುಗಳೂ ಸೂಚನಾರ್ಥ ಪದಗಳಿಂದಾದ ಸ್ಥಳಕಟ್ಟಿನ ಸಂಗ್ರಹವೂ ಚನ್ನವೀರ ಗುರುವಿನ ನೇತೃತ್ವ ಹಾಗೂ ಕರ್ತೃತ್ವದಿಂದಾದ ಕೃತಿಯೆಂಬುದನ್ನು ಶಿವಯೋಗ ಪ್ರದೀಪಿಕೆಯ ಆದಿಯಲ್ಲಿನ ಷಟ್ಪದಿಯು ನಿರ್ದೇಶಿಸಿದೆಯಲ್ಲದೆ ಅಕ್ಕಮಹಾದೇವಿ ಗುಹೇಶ್ವರಲಿಂಗ ಮೊದಲಾದ ಹಿಂದುಪುರಾತರ ಹಾಗೂ ನೂರೊಂದುವಿರತನ ಉದಾ : ಗುರುಬಸವ. ಶಂಕರಲಿಂಗ.

ನಿರ್ವಾಣಿಬೋಳೇಶ, ಗುರುಶಾಂತ, ಶಾಂತಮಲ್ಲೇಶ ಮೊದಲಾದವರ ವಚನಗಳ ಹಾಡುಗಳ ಅಸ್ತಿತ್ವವೂ ಮನಗಾಣಿಸುತ್ತದೆ. ಶಿವಲಿಂಗ ದೇವನು ತನ್ನ ಒಂದು ಹಾಡಿನಲ್ಲಿ ಹೊಗಳಿರುವ "ಗುರುಚನ್ನವೀರೆಂದ್ರನು" [1] ಶಾಂತವೀರದೇಶಿಕನ ತಂದೆ ಹಿಂಡುಪುರಾತರ ವಚನಗಳನ್ನೇ ನಾನಾರಾಗರಸಾಂಕಿತವಾಗಿ ಹಾಡುತ್ತಿದ್ದ ಚನ್ನವೀರಾರ್ಯನೇ ಇರಬಹುದೆಂದು ತಿಳಿಯಲು ಬರುತ್ತದೆ. ಆತನು ರಚಿಸಿರುವ 'ಅಷ್ಟಾವರಣಮಣಿದರ್ಪಣಶತಕ'ವೂ ವೀರಶೈವರ್ಗೆಯಾಚರಣಾಚಾರ ಮಹಾಪ್ರಬಂಧವಾಗಿರುವುದನ್ನು ಇಲ್ಲಿ ಸ್ಮರಿಸಬಹುದು.

ಅಷ್ಟಾವರಣ ಮಹತ್ವಂ
ನಿಷ್ಠ ಶಿವಾಚಾರ ಲಿಂಗಪೂಜಾವಿಧಿಯಂ
ಇಷ್ಟಲಿಂಗಾರ್ಪಿತಂಗಳ
ಶ್ರೇಷ್ಠಂ ಚನವೀರವರ್ಯ ತಿಳಿಪುತ್ತಿರ್ದಂ॥

ಶಿವಲಿಂಗಚಾರಿತ್ರ (೨-೪೯)ದಲ್ಲಿ ಉಕ್ತನಾದ ಈ ಚೆನ್ನವೀರ ಗುರುವೆ 'ವೀರಶೈವ ಷಟ್ಸ್ಥಲ ಸಿದ್ಧಾಂತ' ಗ್ರಂಥದ ಕರ್ತೃವು ಸ್ತುತಿಸಿರುವ ಗುರುವೆಂದು ನಿರ್ದೇಶಿಸಬಹುದಾಗಿದೆ.

ಶಿವಯೋಗ ಪ್ರದೀಪಿಕೆಯಲ್ಲಿ ಪುರಾತರ ಹಾಗೂ ನೂರೊಂದು ವಿರತರ ವಚನ ಇಲ್ಲವೆ ಗೀತಕೆ ಸೂಚನಾರ್ಥ ಪದರಚನೆಯಿಂದ ಸ್ಥಲಕಟ್ಟಿನ ರೂಪದಲ್ಲಿಯೂ ಹೊಸ ಬಗೆಯ ಹಾಡುಗಳನ್ನು ಕಟ್ಟಿರುವುದರಲ್ಲಿ ಅಕ್ಕನ ಮೇಲೆ ಕಟ್ಟಿದ ಹಾಡಿನಲ್ಲಿ ಒಂದು ಹೀಗಿದೆ :

ಪಡುವಣ ದೇಶದಿ ಹುಟ್ಟಿದೆನಮ್ಮ
ಬಡಗಣ ದೇಶದಿ ಬಳೆದೆನು ಆ
ಗರದ ನಾಡಿಗೆ ಕೊಟ್ಟರು ಎನ್ನನು
ದೂರಣ ನೀರ ನಾ ಹೊರಲಾರೆನಮ್ಮ॥

ಎಂಬ ತಾತ್ತ್ವಿಕಾರ್ಥದೊಡನೆ ಚಾರಿತ್ರಕ ಸಂಗತಿಯನ್ನು ಸಂಗಡಿಸಿದಂತಿರುವ ಈ ಪದದಲ್ಲಿ "ಅಗರದ ನಾಡಿನ" ಪ್ರಸ್ತಾಪ ಇಲ್ಲಿ ಗನ್ಯವಾಗಿದೆ. ಅಗರದ ನಾಡಿಗೆ ಸೇರಿದ ಎಳಂದೂರು, ಹದಿನಾಡಿಗೆ ಸೇರಿದ ಹುಲ್ಲಳ್ಳಿಗಳಲ್ಲಿ ಒಂದು ವೀರಶೈವ ಷಟ್ಸ್ಥಲ ಸಿದ್ಧಾಂತವನ್ನು ಮೊತ್ತಮೊದಲಿಗೆ ಮುದ್ರಿಸಿ ಬೆಳಕು ಕಾಣಿಸಿದ ಊರು; ಮತ್ತೊಂದು ಶಿವಲಿಂಗ ಚಾರಿತ್ರದಲ್ಲಿ ಚಿತ್ರಿತನಾಗಿರುವ "ಬಹುವಚನಾರ್ಥ ಪಾಠಕೋವಿದ ವಿದ್ಯಸಮರ್ಥ" ಬಲ್ಲಿದನೂ ಬಹುಮತಿಯುಕ್ತನೂ ಆದ ಚನ್ನವೀರದೇವನು ಮೆರೆದ ಊರು. ಈ ಚನ್ನವೀರದೇವ ಇಲ್ಲವೆ ಚನ್ನಾರ್ಯನ ಪುತ್ರ ಶಾಂತವೀರದೇಶಿಕನು ರಚಿಸಿದ ಶಿವಲಿಂಗ ಚಾರಿತ್ರದಲ್ಲಿ ಮೂರೇ ಅಧ್ಯಾಯಗಳಿರುವುದಕ್ಕೂ, ಚನ್ನವೀರನ ಶಿಷ್ಯನಿಂದ ರಚಿತವಾದ

---

1. ಸದ್ಧರ್ಮದೀಪಿಕೆ : ಸಂಚಿಕೆ ೫೪-೫೫ ಪು-೮

'ವೀರಶೈವ ಷಟ್ಸ್ಥಲ ಸಿದ್ಧಾಂತ'ದಲ್ಲಿ ಕೂಡ ಅಷ್ಟಾವರಣ ಮಹಾತ್ಮ್ಯೆ, ಪರಮ ಪಂಚಾಚಾರ ಹಾಗೂ ಹರನ ಶೈವಾಚಾರವರ್ತನೆಯನತಿಗಳೆದು ವೀರಶೈವ ಪ್ರತಿಷ್ಠೆಯ ನ್ನಾಳ್ವ ಶರಣರೇ ಶ್ರೇಷ್ಠರೆಂದು ಬೋಧಿಸಿದ ಚನ್ನವೀರಗುರುವನ್ನು ಸ್ತುತಿಸಿರುವ ಧರ್ಮಾಚಾರ ಪ್ರಕರಣವೆಂಬ ಮೂರೇ ಮೂರು ಪ್ರಕರಣಗಳಿರುವುದಕ್ಕೂ ತಾತ್ತ್ವಿಕ ಸಂಬಂಧದೊಡನೆ ಗುರು-ಶಿಷ್ಯ ಪರಂಪರೆಯ ವಿಚಾರ ಸರಣಿಯ ಸಂಬಂಧವೂ ಇರುವಂತಿದೆ.

ಜಗತ್ತಿನ ಸಮಸ್ತ ವಸ್ತುವಿನ ಸ್ವರೂಪವೂ ತ್ರ್ಯಾತ್ಮಕ–ತ್ರಿತತ್ತ್ವಾತ್ಮಕವಾದು ದೆಂಬುದರ ಸೂಚಕವಾಗಿರುವಂತಿದೆ. ಈ ದೃಷ್ಟಿಯಿಂದ ನೋಡಿದಾಗ 'ವೀರಶೈವ ಷಟ್ಸ್ಥಲ ಸಿದ್ಧಾಂತ' ಗ್ರಂಥವು ಸಮಗ್ರ ಕೃತಿಯೆಂದು ತಿಳಿಯಬಹುದಾಗಿದೆ. ಸುಮಾರು ಒಂದು ನೂರು ವರ್ಷಗಳ ಹಿಂದೆ ಮೊತ್ತಮೊದಲಿಗೆ ಎಳಂದೂರು ಶಾಸ್ತ್ರಿ ಸುಬ್ಬಣ್ಣ ನವರಿಂದ ಪ್ರಕಟಿತವಾದ ವೀರಶೈವ ಷಟ್ಸ್ಥಲ ಸಿದ್ಧಾಂತವು ಅಗರನಾಡು–ಹದಿನಾಡುಗಳ (ಮೈಸೂರು ಜಿಲ್ಲೆಯ) ಪರಿಸರದ ಕವಿಯೊಬ್ಬನಿಂದ ಎಂದರೆ ಶಿವಯೋಗೀಶ್ವರನಿಂದ ಇಲ್ಲವೆ ಶಿವಲಿಂಗದೇವನಿಂದ (ಸು. 1650ರಲ್ಲಿ) ರಚಿತವಾಗಿರುವುದರ ಸಾಧ್ಯತೆಯನ್ನು ಸಾರುವುದಿಲ್ಲವೆ? ವೀರಶೈವ ಷಟ್ಸ್ಥಲ ಸಿದ್ಧಾಂತದಲ್ಲಿ ಅದರ ಕರ್ತೃವಿನಿಂದ ಸ್ತುತಿಸ ಲ್ಪಟ್ಟ ಗುರುವಾದರೋ ಶಾಂತವೀರದೇಶಿಕನ ತಂದೆ ಚೆನ್ನವೀರಾರ್ಯನೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

# ಯುದ್ಧಕ್ಕೆ ಮೊದಲು.......

ಡಾ|| ಶ್ರೀಧರ ಎಚ್. ಜಿ.

ಸಾಮಾನ್ಯವಾಗಿ ಚಕ್ರವರ್ತಿಗಳು ಸಾಮ್ರಾಜ್ಯ ವಿಸ್ತರಣೆಯ ಮಹತ್ವಾಕಾಂಕ್ಷೆಯಿಂದ ಜೈತ್ರಯಾತ್ರೆಗೆ ಹೊರಡುತ್ತಿದ್ದರು. ಪ್ರಾಚೀನ ರಾಜನೀತಿಜ್ಞರು ಜೈತ್ರಯಾತ್ರೆಗೆ ಕಾಲವನ್ನೂ ಗೊತ್ತುಪಡಿಸಿದ್ದರು. "ಶರದಂ ಯಾತ್ರೆಗೆ ಲೇಸು" ಎಂದು 'ಸೂಕ್ತಿ ಸುಧಾರ್ಣವ' ಕೃತಿಯಲ್ಲಿದೆ. (ಪು. 370) "ಕಾಲಕ್ಕಿಂತ ಮುಖ್ಯವಾಗಿ ಶತ್ರು ದುರ್ಬಲನಾಗಿದ್ದಾಗ, ತಾನು ಬಲಿಷ್ಠನಾಗಿದ್ದಾಗ ಯುದ್ಧಪ್ರಯಾಣ ಮಾಡಬಹುದು" ಎಂದು ಮನುಸ್ಮೃತಿಯಲ್ಲಿದೆ. ಸಾಮಾನ್ಯವಾಗಿ ಮಳೆಗಾಲದಲ್ಲಿ ಯುದ್ಧದ ಸಲುವಾಗಿ ಅರಸರು ಹೊರಡುತ್ತಿರಲಿಲ್ಲ.

ಸಾಕಷ್ಟು ಸಿದ್ಧತೆಯೊಂದಿಗೆ ಅರಸರು ಸೈನ್ಯ ಸಮೇತರಾಗಿ ಯುದ್ಧರಂಗವನ್ನು ತಲುಪುತ್ತಿದ್ದರು. ಸುರಕ್ಷಿತ ಸ್ಥಳವನ್ನಾಯ್ದು ಶಿಬಿರಗಳು ನಿರ್ಮಾಣಗೊಳ್ಳುತ್ತಿದ್ದವು. ಅನಂತರ ಯುದ್ಧವನ್ನು ಆರಂಭಿಸುವುದರ ಬಗೆಗೆ ನಿಶ್ಚಯವಾಗುತ್ತಿತ್ತು. ಕನ್ನಡ ಕಾವ್ಯಗಳ ನೆರವಿನಿಂದ ಈ ಸಂದರ್ಭವನ್ನು ಅವಲೋಕನ ಮಾಡುವ ಪ್ರಯತ್ನ ಇಲ್ಲಿನದು.

ಅಭಿಮಾನಿಗಳೂ, ಅತ್ಯುಗ್ರರೂ ಆದ ಕನ್ನಡಿಗರ ಬದುಕೊಂದು ವೀರಕಾವ್ಯ. ನಿರಂತರ ಸಂಘರ್ಷದಲ್ಲಿ ಬದುಕಿದ ಅವರ ರಕ್ತದ ಕಣಕಣದಲ್ಲಿ ವೀರರಸ ತಡೆಯಿಲ್ಲದೆ ಉಕ್ಕುತ್ತದೆ; ಉತ್ಕರ್ಷಕ್ಕೇರುತ್ತದೆ. ವೀರಯುಗದಲ್ಲಿ ಸೃಷ್ಟಿಯಾದ ಕಾವ್ಯದ ಅಂತರಂಗದಲ್ಲಿ ಸಮಕಾಲೀನ ಬದುಕಿನ ವೀರಧ್ವನಿ ಮೊಳಗುತ್ತದೆ. ಯುದ್ಧದ ಮುನ್ನಾದಿನ ಯುದ್ಧ ನಿಶ್ಚಯದ ಸಲುವಾಗಿ ವೈರಿಗಳ ಕಡೆಯಿಂದ ದೂತನೊಬ್ಬ ಬಂದು, ನಾಳೆ ಮುಂಜಾನೆ ಯುದ್ಧ ಆರಂಭವಾಗಬೇಕೆಂಬ ತನ್ನ ಅರಸನ ಅಭಿಲಾಷೆಯನ್ನು ತಿಳಿಸುತ್ತಿದ್ದನು. ಇದು ಧರ್ಮಯುದ್ಧದ ಒಂದು ಪದ್ಧತಿಯಾಗಿತ್ತು. ನಮ್ಮ ಕಾವ್ಯಗಳಲ್ಲಿ ಈ ಬಗ್ಗೆ ಸ್ಪಷ್ಟವಾದ ಸೂಚನೆಯಿದೆ.

ಮೂಲ ಮಹಾಭಾರತದಲ್ಲಿ ಕೌರವನು ಯುದ್ಧನಿಶ್ಚಯದ ಸಲುವಾಗಿ ಶಕುನಿಯ ಮಗ ಉಲೂಕನನ್ನು ಪಾಂಡವರಲ್ಲಿಗೆ ಕಳಿಸುವನು. "ಕುರುಕ್ಷೇತ್ರವು ಯಾವ ವಿಧವಾದ ಕೆಸರೂ ಇಲ್ಲದೆ ಯುದ್ಧಮಾಡಲು ಯೋಗ್ಯವಾದ ಪ್ರದೇಶವಾಗಿದೆ. ಹಾದಿಯೂ ಸಹ ಸಮನಾಗಿದ್ದು ಸುಗಮವಾಗಿದೆ. ನಿನ್ನ ಕುದುರೆಗಳೂ ಚೆನ್ನಾಗಿ ಪೋಷಿಸಲ್ಪಟ್ಟು ದಷ್ಟಪುಷ್ಟವಾಗಿವೆ. ಆದ್ದರಿಂದ ನಾಳೆಯೇ ಕೇಶವನೊಡನೆ ಕೂಡಿಕೊಂಡು ಯುದ್ಧಕ್ಕೆ

ಬಾ” (ಮಹಾಭಾ. ಪು. 6005) ಎಂದು ದುರ್ಯೋಧನನು, ಧರ್ಮರಾಯನನ್ನು ಆಹ್ವಾನಿಸುವನು. ಮಾತ್ರವಲ್ಲ, ಧರ್ಮರಾಯನ ಸಹೋದರರು ಹಾಗೂ ಕೃಷ್ಣ, ಪಾಂಡವ ವೀರನಾದ ದ್ರುಪದ, ವಿರಾಟ, ಧೃಷ್ಟದ್ಯುಮ್ನ, ಶಿಖಂಡಿ ಮೊದಲಾದವರನ್ನು ಯುದ್ಧಕ್ಕೆ ಆಹ್ವಾನಿಸಿ ಪ್ರತ್ಯೇಕ ಸಂದೇಶವನ್ನು ಕಳಿಸುವನು. ಈ ಸಂದರ್ಭದ ಕೌರವನ ಮಾತುಗಳು ಪ್ರಚೋದನಾತ್ಮಕವಾಗಿದ್ದು, ವೀರರನ್ನು ಕೆರಳಿಸುವಂತಿದೆ. ವ್ಯಾಸ ಭಾರತದ ಈ ದೃಶ್ಯವನ್ನು ಪಂಪ ನಿರ್ವಹಿಸುವ ರೀತಿ ಅನನ್ಯವಾದುದು. ಅದು ಆತನ ಮನೋಧರ್ಮವನ್ನು ಪ್ರತಿನಿಧಿಸಬಲ್ಲುದು. ಸ್ವತಃ ದಂಡನಾಯಕನಾದ ಪಂಪ ನೀಡುವ ಯುದ್ಧರಂಗದ ಬದುಕಿನ ಯೋಧರ ಚಿತ್ರ ಅಪೂರ್ವವಾದುದು. ಪಂಪ ನೀಡುವ ಯುದ್ಧ ರಂಗದ ನೈಜವರ್ಣನೆ ಸಮಕಾಲೀನ ಬದುಕಿನ ಚಿತ್ರವೊಂದನ್ನು ಕಣ್ಣೆದುರು ತೆರೆಯ ಬಲ್ಲದು.

ಸಮಸ್ತ ಸೇನಾಸಮೇತನಾಗಿ ಬಂದ ದುರ್ಯೋಧನ ಕುರುಕ್ಷೇತ್ರದ ಪೂರ್ವ ದಿಕ್ಕಿನಲ್ಲಿ ಬೀಡುಬಿಟ್ಟು, “ಧರ್ಮಪುತ್ರನಲ್ಲಿ ಗುಳೂಕನೆಂಬ ದೂತನನಿಂತೆಂದಟ್ಟಿದಂ ;

ಮಸೆಯಿಸುಗುಳ್ಳ ಕೆಯ್ದುಗಳನರ್ಚಿಸುಗಾನೆಗಳಂ ತಗುಳ್ದು ಪೂ
ಜಿಸುಗೆ ವಿಶುದ್ಧ ವಾಜಿಗಳನಾಜಿಗೆ ಜೆಟ್ಟಿಗರಾಗಿ ಕೊಳ್ಳಿವೀ
ಸಿಸುಗೆ ನಿರಂತರಂ ರವಳಿ ಘೋಷಿಸುಗಿಂದೆ ಕಡಂಗಿ ಸಾರ್ಚಿ ಬಿ
ಟ್ಟುಪಿರಪೆ ನಿಲ್ಪ ಕಾರಣಮದಾವುದೊ ನೆಟ್ಟನೆ ನಾಳೆ ಕಾಳೆಗಂ

(ಪಂಪಭಾ. 10-32)

“ಇರುವ ಆಯುಧಗಳನ್ನು ಹರಿತಮಾಡಲಿ, ಆನೆಗಳನ್ನು ಪೂಜಿಸಿ ಪರಿಶುದ್ಧವಾದ ಕುದುರೆಗಳನ್ನು ಶ್ರದ್ಧೆಯಿಂದ ಪೂಜಿಸಲಿ : ಯುದ್ಧವೀರರಾಗಿ ಯುದ್ಧಸೂಚಕವಾದ ದೀವಟಿಕೆಗಳನ್ನು ಬೀಸಲಿ. ನಿಲ್ಲಿಸದೆ ಅವಿರತವಾಗಿ ಯುದ್ಧಘೋಷವಾಗುತ್ತಿರಲಿ : ಉತ್ಸಾಹದಿಂದ ಯುದ್ಧಮಾಡಬೇಕಾದ ಈ ದಿನದಂದು ಯುದ್ಧರಂಗದಲ್ಲಿ ವ್ಯರ್ಥವಾಗಿ ಕಾಲಹರಣ ಮಾಡುತ್ತಿರುವ ಕಾರಣವೇನು ? ನಾಳೆಯೇ ಯುದ್ಧ ಆರಂಭವಾಗುತ್ತದೆ” ಎಂಬ ಈ ಮಾತು ಪಂಪನ ಕಾವ್ಯದಲ್ಲಿ ಕೇವಲ ಒಂದು ಹೇಳಿಕೆಯಾಗಿ ಉಳಿಯುವುದಿಲ್ಲ. ಎದುರಾಳಿ ಅರಸನನ್ನು ಮೂದಲಿಸುವ ಚುಚ್ಚುವ ಮಾತುಗಳಿವು. ಯುದ್ಧ ಆರಂಭವಾಗುವ ಹಿಂದಿನ ದಿನದ ಸಂಜೆಯ ಎಲ್ಲಾ ಘಟನೆಗಳು ಪಂಪನ ಈ ಪದ್ಯಕ್ಕೆ ವ್ಯಾಖ್ಯಾನವೆಂಬಂತೆ ನಡೆಯುತ್ತದೆ.

ವ್ಯಾಸರ ಚಿತ್ರಣಕ್ಕೂ ಪಂಪನ ವಿವರಣೆಗೂ ಸಾಕಷ್ಟು ವ್ಯತ್ಯಾಸವಿರುವುದು ಮೊದಲ ನೋಟಕ್ಕೇ ಹೊಳೆಯುತ್ತದೆ. ರವಳಿ ಘೋಷಣೆ, ಕೊಳ್ಳಿಬೀಸುವಿಕೆಗಳು ಇಲ್ಲಿನ ವಿಶೇಷಗಳು. ಪಂಪಕೊಡುವ ಈ ಚಿತ್ರ ಯುದ್ಧಶಿಬಿರವೊಂದನ್ನು ಕಣ್ಣೆದುರು ನಿಲ್ಲಿಸುತ್ತದೆ. ಪಂಪನ ಮಾತಿಗೆ ಪೂರಕವಾಗಿ ಇನ್ನಿತರ ಕಾವ್ಯಗಳಲ್ಲೂ ಈ ಬಗ್ಗೆ ಸೂಚನೆಗಳು ದೊರೆಯುತ್ತವೆ. ಕೃಷ್ಣನಿಗೆ ಶರಣಾಗತನಾಗಲು ಸೂಚಿಸಿ ಜರಾಸಂಧನು ಮಹತ್ತರರಿಬ್ಬರನ್ನು ಕಳಿಸುವನು. (ನೇಮಿಪು. 11. 108ವ) ಚಂದ್ರಪ್ರಭ ಪುರಾಣದಲ್ಲಿ ಅರಸನು

ಸೈನ್ಯವನ್ನು ಬೀಡುಬಿಡಿಸಿ ವಿಶ್ರಮಿಸಿದಾಗ, ಎದುರು ಪಕ್ಷದ ದೂತನು ಯುದ್ಧಕ್ಕೆ ಆಹ್ವಾನ ನೀಡುವ ಸಂದೇಶವನ್ನು ತರುವನು. ಇದನ್ನು ಕೇಳಿ ಸೇನಾಶಿಬಿರಗಳಲ್ಲಿ ಯುದ್ಧ ಸಿದ್ಧತೆಗೆ ಸೈನಿಕರು ತೊಡಗುವರು. (ಚಂದ್ರಪು. 10-54ವ) ಪೊನ್ನನಲ್ಲಿ ಖೇಚರ ರಾಜನು ಪಾಳೆಯ ಊರಿ ಯುದ್ಧದ ಆಹ್ವಾನವನ್ನು ಮುಟ್ಟಿಸುವುದಕ್ಕೆಂದು ವಿಶೇಷ ದೂತನನ್ನು ಕಳಿಸುವನು. (ಶಾಂತಿಪು. 5-47)

ಕೃಷ್ಣನು ಸೈನ್ಯ ಸಮೇತನಾಗಿ ಬಂದು ಬೀಡುಬಿಟ್ಟಿರುವನೆಂಬುದಂ "ಜರಾಸಂಧಂ ಕೇಳ್ದು ಮತಿವಂತನುಮನಾಗತಮತಿಯುಮೆಂಬ ಪೆರ್ಗಡೆಗಳಂ ಕರೆದು ನೀಮುಂ ಹರಿಯಲ್ಲಿಗೆ ಪೋಗಿ ನಿನಗೆ ಜರಾಸಂಧಂ ಕರುಣಿಸುವಂತು ಸ್ವಾಮಿ ಕೊಲ್ಲದಿರು ಬಾಳ್ದಲೆ ವಂದೆನೆಂದು ಕಾಣೆಂಬುದಂ ನುಡಿದು ಜಡಿದು ಪೇೞ್ದುಬನ್ನಿಂ" (ಬಂಹರಿ. 11-67ವ) ಎಂದಿದೆ. ಇಲ್ಲಿ ಇಬ್ಬರು ಪೆರ್ಗಡೆಗಳು ಈ ಕೆಲಸಕ್ಕೆ ನಿಯೋಜಿತರಾಗಿರುವರು. ಕುಮಾರ ವ್ಯಾಸನಲ್ಲಿ ಭೀಷ್ಮನ ಅಪ್ಪಣೆಯಂತೆ 'ಉಲೂಕ'ನೆಂಬ ದೂತ ಪಾಂಡವರಿಗೆ ಯುದ್ಧದ ಆಹ್ವಾನವನ್ನು ನೀಡಲೆಂದು ಬರುವನು. (ಕುವ್ಯಾಭೀ. 1-57)

ಸಂಧಿವಿಗ್ರಹಿ ಅರಸನ ರಾಜಧಾನಿಗೆ ಯುದ್ಧ ಅಥವಾ ಸಂಧಾನವನ್ನು ನಿರ್ಣಯಿಸಲು ಬರುವ ವ್ಯಕ್ತಿಯಾದರೆ ಇಲ್ಲಿನ ದೂತ ಯುದ್ಧಶಿಬಿರವನ್ನು ಹೂಡಿದ ಅನಂತರ ಕಾಳಗದ ದಿನವನ್ನು ನಿರ್ಣಯಿಸಲು ಬರುವ ವ್ಯಕ್ತಿ. ಪಂಪನಲ್ಲಿ ದೂತನನ್ನು 'ಪೆರ್ಗಡೆ' ಎಂದು ಕರೆದಿದೆ. (ಪಂಪಭಾ 9–89) ಬಂಧುವರ್ಮನ ಹರಿವಂಶಾಭ್ಯುದಯದಲ್ಲಿಯೂ ಈತನನ್ನು 'ಪೆರ್ಗಡೆ' ಎಂದು ಹೇಳಿದೆ. ಹೀಗೆ ಬರುವ ದೂತರು ತಮ್ಮ ಅರಸರ ಶೌರ್ಯ, ಸಾಮರ್ಥ್ಯವನ್ನು ಹೇಳಿ, ವೈರಿ ಅರಸರ ಕೆಚ್ಚು ಕೆರಳುವಂತೆ ಪ್ರಚೋದನಾತ್ಮಕವಾಗಿ ಮಾತನಾಡುತ್ತಿದ್ದರೆಂದು ತೋರುತ್ತದೆ. 'ಜಡಿದು ಪೇೞ್ದು' ಎಂಬ ಮೇಲಿನ ಉಲ್ಲೇಖ ಇದನ್ನೇ ಸೂಚಿಸುತ್ತದೆ. ಪಂಪನಲ್ಲಿ ಈ ಪದದ ಬಳಕೆಯಾಗದಿದ್ದರೂ ಅಲ್ಲಿನ ದೂತ ನಾಡುವ ಮಾತುಗಳು ಮನವನ್ನು ಚುಚ್ಚುವಂತಿದೆ. ಧರ್ಮರಾಯನ ಬಲವನ್ನು ವ್ಯಂಗ್ಯ ದಿಂದ ಕುಚೋದ್ಯ ಮಾಡುವ ರೀತಿ ಅಲ್ಲಿನದು.

ಹೀಗೆ ಯುದ್ಧ ನಿಶ್ಚಯಕ್ಕೆಂದು ಬಂದ ದೂತರನ್ನು ಅವಮಾನಿಸುತ್ತಿರಲಿಲ್ಲ. ವ್ಯಾಸರಲ್ಲಿ ಈ ಬಗ್ಗೆ ಸೂಚನೆಗಳಿವೆ. ಕೌರವನ ಮಾತನ್ನಾಡುವ ಈತನನ್ನು ಹಿಂಸಿಸ ಬಾರದೆಂದು ಧರ್ಮರಾಯನು ಭೀಮನಿಗೆ ಹೇಳುವನು. ಕೃಷ್ಣನಲ್ಲಿಗೆ ಬರುವ ಮಹತ್ತರ ರಿಬ್ಬರಿಗೂ ಹಿರಿದಾಗಿ ಮನ್ನಣೆಮಾಡಿ ಕಳಿಸಿದಂತೆ ನೇಮಿನಾಥ ಪುರಾಣದಲ್ಲಿದೆ. (ನೇಮಿಪು. 11-108ವ) ಪೊನ್ನನಲ್ಲಿಯೂ ಆಹ್ವಾನ ಪುರುಷನಿಗೆ ಧನವನ್ನೂ, ದೂತನಿಗೆ ಪಸಾಯನವನ್ನೂ ಕೊಟ್ಟು ಕಳಿಸಿದಂತೆ ಉಲ್ಲೇಖವಿದೆ. (ಶಾಂತಿಪು. 5–48)

ಕಾಳಗ ನಿಶ್ಚಯದ ಸಂದೇಶವನ್ನು ತಂದ ದೂತನಲ್ಲಿ ಅರಸರು ಮರುಉತ್ತರ ವನ್ನೂ ಕಳಿಸುತ್ತಿದ್ದರು. ವ್ಯಾಸರಲ್ಲಿ ಉಲೂಕನ ಮಾತಿಗೆ ಪ್ರತಿಕ್ರಿಯಿಸುತ್ತ ಕೃಷ್ಣ :

"ಶ್ರುತಂ ವಾಕ್ಯಂ ಗೃಹೀತೋsರ್ಥೋ ಮತಂ ಯತ್ತೇ ತಥಾಸ್ತು-ತತ್." ಪಾಂಡವರು ನಿನ್ನ ಸಂದೇಶವನ್ನು ಕೇಳಿದರು. ನಿನ್ನ ಮಾತಿನ ಅರ್ಥವನ್ನೂ ಸಹ ಮನನ ಮಾಡಿಕೊಂಡರು. ಯುದ್ಧದ ವಿಷಯದಲ್ಲಿ ನಿನ್ನ ಅಭಿಪ್ರಾಯವು ಹೇಗಿರುವುದೋ ಹಾಗೆಯೇ ನಡೆಯಲಿ. ನಾಳೆ ಇದೇ ವೇಳೆಗೆ ನೀನು ನಮ್ಮನ್ನು ರಣಭೂಮಿಯಲ್ಲಿ ಸಂಧಿಸುವೆ. ಪುರುಷನಂತೆ ವರ್ತಿಸು" ಎಂದಿದ್ದಾನೆ. ಕೃಷ್ಣನ ಈ ಮಾತನ್ನು ಧರ್ಮರಾಯನೂ ಅನುಮೋದಿಸುವನು. ಅರ್ಜುನ, ಭೀಮ, ನಕುಲ, ಸಹದೇವ, ವಿರಾಟ, ದ್ರುಪದ, ಮೊದಲಾದ ವೀರರೆಲ್ಲರೂ ಕೌರವನಿಗೆ ಮರುಆಹ್ವಾನವನ್ನು ಯುದ್ಧಕ್ಕೆ ನೀಡುವರು. ಇಲ್ಲಿನ ಕೃಷ್ಣನ ಮಾತು ಪಂಪನ ರಚನೆಗೆ ಸ್ಫೂರ್ತಿ ನೀಡಿದಂತಿದೆ. ಪಂಪನಲ್ಲಿ ದೂತನ ಮಾತಿಗೆ ಧರ್ಮರಾಯ ತೀವ್ರವಾಗಿ ಪ್ರತಿಕ್ರಿಯಿಸುವನು. ಆತನ ಇಲ್ಲಿನ ಚಿತ್ರ ವ್ಯಾಸರ ಅನುಕರಣೆಯಾಗದೆ ಸ್ವತಂತ್ರ ನಿರೂಪಣೆಯಾಗಿದೆ. ಪಂಪನ ಧರ್ಮರಾಯ ಆಡುವ ಮಾತುಗಳು ವೀರಯುಗಕ್ಕೆ ಸೇರಿದವು. ಅದರಲ್ಲಿ ಕ್ಷಾತ್ರ ತೇಜಸ್ಸಿನ ಹೊಳಪಿದೆ ; ಮೆರುಗಿದೆ.

ಪಗೆ ಮಸೆದಂತೆಕೆಯ್ದು ಮಸೆದಿರ್ದುವು ಪೂಜಿಸುವಂಕದಾನೆ ವಾ
ಜಿಗಳೆಮುಗಿಲ್ಲ ಜಟ್ಟಗರೆ ಎನ್ನೊಡವುಟ್ಟದರಲ್ತೆ ನಾಲ್ಕುಮಾ
ನೆಗಳಿವನಾಂ ದಲೀ ರಣಮೊಳರ್ಚಿಸಿ ಬಿಟ್ಟಪೆನೇಕೆ ಮಾಣ್ಬೆನಾ
ವಗಮಿಡಸಿಂತೆ ಪೇಟಿರ್ ಸೆಜುಂತಿಯ ನಾಳೆಯೆ ಕಾಳೆಗಮಂತೆ ಗೆಯ್ವಮಾಂ

(ಪಂಪಭಾ. 10-33)

ಎಂಬಲ್ಲಿ "ನಾಳೆಯೆ ಕಾಳೆಗಮಂತೆಗೆಯ್ವಮಾಂ," ಎಂಬ ಕೊನೆಯ ಮಾತಿಗೆ ವ್ಯಾಸರ ಪ್ರೇರಣೆಯಿರುವುದು ಸ್ಪಷ್ಟ. ವ್ಯಾಸರಲ್ಲಿ "ಧರ್ಮರಾಯ ನಿನ್ನ ಸಂದೇಶವನ್ನು ಕೇಳಿದ್ದಾಯ್ತು. ಅದರ ಅಭಿಪ್ರಾಯವನ್ನೂ ಗ್ರಹಿಸಿದ್ದಾಯ್ತು. ನಿನ್ನ ಅಭಿಮತವು ಹೇಗಿರುವುದೋ ಹಾಗೆಯೇ ಅದು ನಡೆದು ಹೋಗಲಿ" ಎಂದು ತೀರಾ ಸೌಮ್ಯವಾಗಿ ಮಾತನಾಡುವನು. ಆದರೆ ಪಂಪನ ಧರ್ಮರಾಯ ಕ್ಷಾತ್ರತೇಜಸ್ಸಿನ ಪ್ರತಿರೂಪ. ಕೌರವನ ವ್ಯಂಗ್ಯದ ಮಾತುಗಳಿಗೆ ಅದೇ ರೀತಿಯಲ್ಲಿ ವ್ಯಂಗ್ಯದ ಮಾತುಗಳ ಮೂಲಕವೇ ಪ್ರತ್ಯುತ್ತರ ನೀಡುವ ಜೀವಂತ ವ್ಯಕ್ತಿ. ಪಂಪನ ಸೈನಿಕ ಮನೋಧರ್ಮವೂ ಇಲ್ಲಿ ಕೆಲಸ ಮಾಡಿದೆಯೆಂಬುದು ಸ್ಪಷ್ಟ. ಕುಮಾರವ್ಯಾಸನಲ್ಲಿ ಇದೇ ದೃಶ್ಯ ವ್ಯಾಸರ ಅನುಸರಣೆ ಮಾತ್ರವಾಗಿದೆ. (ಕುವ್ಯಾಭೀ. 1-61)

ಹೀಗೆ ಕಾಳಗದ ದಿನವನ್ನು ನಿಶ್ಚಯಿಸಿಕೊಂಡು ಶತ್ರುವಿನ ದೂತನ ನಿರ್ಗಮನವಾಗುತ್ತಿದ್ದಂತೆಯೇ ಯುದ್ಧ ಶಿಬಿರಗಳಲ್ಲಿ ನಾಳಿನ ಯುದ್ಧಕ್ಕೆ ತಯಾರಿ ಆರಂಭವಾಗುತ್ತಿತ್ತು. ಪಾಂಡವರ ಸಂದೇಶವನ್ನು ಕೇಳಿದೊಡನೆಯೇ ವ್ಯಾಸರ ಕೌರವನು "ಬಂಧುಗಳೇ, ರಾಜರ ಸೈನ್ಯಗಳಿಗೂ, ಮಿತ್ರರ ಸೈನ್ಯಗಳಿಗೂ ಈ ಕೂಡಲೇ ಆಜ್ಞೆಮಾಡಿರಿ. ಎಲ್ಲ ಸೈನಿಕರೂ ನಾಳೆ ಬೆಳಗಾಗುವ ಮೊದಲೇ ಯುದ್ಧಕ್ಕೆ ಸಿದ್ಧರಾಗಿ ರಣರಂಗದಲ್ಲಿರಬೇಕು"

ಎಂದು ಸೂಚನೆ ಹೊರಡಿಸುವನು. ಆದರಂತೆ ಕರ್ಣನು ತನ್ನ ದೂತರಿಗೆ ಆಜ್ಞಾಪಿಸುವನು. ಅವರಲ್ಲಿ ಕೆಲವರು ರಥ, ಕೆಲವರು ಒಂಟೆ, ಮತ್ತೆ ಕೆಲವರು ಹೇಸರ ಕತ್ತೆಗಳನ್ನೇರಿ, ಇನ್ನು ಕೆಲವರು ವೇಗಶಾಲಿ ಕುದುರೆಗಳನ್ನೇರಿ ಸೇನೆಯ ಎಲ್ಲ ವಿಭಾಗಗಳಿಗೂ ಹೋಗಿ ಕರ್ಣನ ಆಜ್ಞೆಯನ್ನು ವಿವರಿಸಿ ಹೇಳುವರು. ಇದನ್ನವಲಂಬಿಸಿ ಕನ್ನಡ ಕಾವ್ಯಗಳಲ್ಲಿ ಸೃಷ್ಟಿಯಾದ ದೃಶ್ಯಗಳು ಅಪೂರ್ವವಾದವು. ಸೈನಿಕರ ವೀರಾವೇಶ, ಯುದ್ಧ ಸಿದ್ಧತೆ, ಆತ್ಮಸಮರ್ಪಣೆಗೆ ಮಾಡುವ ನಿರ್ಧಾರಗಳೆಲ್ಲವೂ ಕಣ್ಣೆದುರು ನಿಲ್ಲುತ್ತವೆ. ಸೈನಿಕರ ಧೀರೋದಾತ್ತ ಬದುಕಿನ ಆದರ್ಶ, ಔನ್ನತ್ಯ, ಮೌಲ್ಯಗಳು ಇಲ್ಲಿ ಹರಳುಗೊಂಡಿವೆ. ಈ ಸಂದರ್ಭದಲ್ಲಿ ಪಂಪ ನೀಡುವ ಚಿತ್ರ ಅನನ್ಯವಾದುದು. (ಪಂಪಭಾ 10-32) ಅದು ವಾಸ್ತವ ಬದುಕಿನ ಎಲ್ಲಾ ಸಂಭ್ರಮಗಳನ್ನೂ ಒಳಗೊಂಡು ಮೂಡಿದೆ.

ಪಂಪನ ಧಾರ್ಮಿಕ ಕೃತಿಯಾದ ಆದಿಪುರಾಣದಲ್ಲಿ ಸೈನಿಕರು ಯುದ್ಧ ಸಿದ್ಧತೆ ಮಾಡುತ್ತಿರುವ ಒಂದು ಸುಂದರವಾದ ಚಿತ್ರವಿದೆ :

> ಮಸೆಯಿಪ ಶಸ್ತ್ರಕೋಟಿ ಸಮಕಟ್ಟುವ ಸನ್ನಣಮುಟ್ಟಿಯಿಂದವು
> ರ್ಚಿಸುವ ತುರಂಗದಂತಿರಥ ಸಂಕುಳಮೇಱುವ ದರ್ಭಶಯ್ಯೆ ಪೂ
> ಜಿಸುವ ಜನೇಂದ್ರಬಿಂಬಮೆಸೆವುಗ್ರರಣಾನಕರೌದ್ರ ಘೋಷಮೇ
> ರ್ಪೆಸಕಮುಸುಂಟುಮಾಡಿದುದು ಪಂದೆಗಮುಂದಿನ ವೀರಗೋಷ್ಠಿಯೊಳ್
> (ಆದಿಪು. 14-90)

ಪಂಪನ ಈ ಪದ್ಯವು ವಿಕ್ರಮಾರ್ಜುನವಿಜಯದ "ಮಸೆಯಿಸುಗುಳ್ಳ ಕೆಯ್ದುಗಳನ್" ;.... (ಪಂಪಭಾ. 10-32) ಪದ್ಯವನ್ನು ಹೋಲುತ್ತದೆ. ಈ ಎರಡೂ ಪದ್ಯಗಳು ಯುದ್ಧ ಸಿದ್ಧತೆಗೆ ಸಂಬಂಧಿಸಿದ ಚಿತ್ರವನ್ನು ನೀಡುತ್ತದೆ. ಇನ್ನಿತರೆ ಕಾವ್ಯಗಳಲ್ಲೂ ಪಂಪನ ಈ ವಿವರಗಳನ್ನು ಪೋಷಿಸುವ ಮಾಹಿತಿಗಳಿವೆ.

ಬಂಧುವರ್ಮನ ಹರಿವಂಶಾಭ್ಯುದಯ ಕೃತಿಯಲ್ಲಿ ಯುದ್ಧಸಿದ್ಧತೆಯ ಬಗ್ಗೆ ಸುಂದರವಾದ ನಿರೂಪಣೆಯಿದೆ :

"ತನ್ನ ಪಡೆಯೊಳುಳ್ಳರಸುಮಕ್ಕಳೆಲ್ಲರುಮಂ ಬರಿಸಿ ನಾಳೆ ಕಾದುವಮೆಂದು ಸಮಕಟ್ಟಿ ಕರ್ಣಂಗೆ ಸೇನಾಪತಿಪಟ್ಟಂಗಟ್ಟಿ ರಣಭೇರಿಯುಮಂ ಪೊಯ್ಯಲ್ವೇೞ್ದು ಸಮರ ಭೂಮಿಯುಂ ಸಮಱುಪಂತಾಗಿ ನಿಯಮಿಸಿ ಕೆಲರಂ ತಟದ್ಘೋಷಣೆವಿಡಿಸಲ್ವೇೞ್ದು ಕೆಲರನಿರುಳೊಳ್‌ಕೊಳ್ಳಿವೀಸಿಸಲ್ವೇೞ್ದು ಚಕ್ರಂ ಮೊದಲಾಗಾಯುಧ ವಾಹನಂಗಳನರ್ಚಿಸುತ್ತಮಿರ್ದರಂದಿನ ದಿವಸಮೆರಡುಂ ಪಡೆಯ ಸುಭಟರಿಷ್ಟದೇವತಾಯುಧಂಗಳಂ ಪೂಜಿಸುತ್ತಂ ದಾನ ಸನ್ಮಾನಂಗಳಂ ವಿರಾಜಿಸುತ್ತಮಿರ್ದರ್" (ಬಂಹರಿ.11-80ವ) ಎಂಬ ವರ್ಣನೆಯಿದೆ. ಈ ಹಿನ್ನಲೆಯಲ್ಲಿ ಯುದ್ಧದ ಮೊದಲಿನ ದಿನ, ಯುದ್ಧ ಶಿಬಿರಗಳಲ್ಲಿ ಆಗುವ ಒಂದೊಂದೇ ಘಟನೆಯನ್ನು ಪರಿಶೀಲಿಸಬಹುದು.

ಕಾಳಗವನ್ನು ನಿಶ್ಚಯಿಸಿಕೊಂಡು ದೂತ ನಿರ್ಗಮಿಸುತ್ತಿದ್ದಂತೆ, ಯುದ್ಧ ನಿಶ್ಚಯವಾದ ವಿಷಯವನ್ನು ಸೇನಾ ಶಿಬಿರಗಳಲ್ಲಿ ಸಾರುತ್ತಿದ್ದರು. ಹೀಗೆ ಸಾರುವವರಿಗೆ 'ಪಡೆವಳರು' ಎಂದು ಕಾವ್ಯದಲ್ಲಿ ಮಾಹಿತಿಯಿದೆ. "ಸೇನಾನಿ ವಾಹಿನೀಪತಿ ತಾನಕ್ಕುಂ ಪಡೆವಳಂ" (ವಸ್ತುಕೋ 61-54) ಎಂದಿದೆ. "ಅಂತು ವಿರಾಟನಂದನಂ ಸೇನಾನಾಯಕಂ ಮಾಡೆ ನಾಳೆ ಕಾಳಗಮೆಂದು ಪಡೆವಳರ್ ಪೋಗಿ ಸಾಱೆಮೆಂಬುದುಂ" (ಪಂಪಭಾ 10-34) ಎಂದು ಪಂಪನಲ್ಲಿದೆ. "ಪಡೆವಳ್ಳಂ ಗಡಮಾ ಬಲಕ್ಕೆ ದಲ್ ಧೃಷ್ಟದ್ಯುಮ್ನ" (ಪಂಪಭಾ 10-4) ಎಂದು ಇನ್ನೊಂದೆಡೆಯಿದೆ. ಹೀಗಾಗಿ 'ಪಡೆವಳ್ಳಂ' ಎಂದರೆ ಸೈನ್ಯದ ಒಂದು ವಿಭಾಗದ ಮುಖ್ಯಸ್ಥ, ಸೇನಾಪತಿ ಎಂದು ಸ್ವೀಕರಿಸಬಹುದು. ಧೃಷ್ಟದ್ಯುಮ್ನ ಪಾಂಡವರ ಸೇನಾನಿ ಎಂಬುದು ಉಚಿತವಾದ ಅಂಶ. ಕ್ರಿ.ಶ.993ರ ಶಾಸನವೊಂದರಲ್ಲಿ "ಮಣ್ಡಳೇಸ್ವರಂ ಪರಿಕ ನಡೆವರ ಪಡವಳ ಗುಯ್ಯನುಂ" ಎಂದಿದೆ. (ಇಏ.1946, ಹಾನಗಲ್ 250.28) 'ಪಡೆವಳ್ಳ ತೈಲ' ಎಂಬುದು ಅತ್ತಿಮಬ್ಬೆಯ ಮಗನ ಹೆಸರು. (ಅಜಿಪು.1.41) "ಪಡೆವಳ್ಳಂ ಡಂಗುರಂಬೊಯ್ಸಿದಂ" (ಅನಂಪು 9.59) ಎಂದು ಜನ್ನನಲ್ಲಿದೆ. ಯುದ್ಧಕ್ಕೆ ಸಿದ್ಧರಾಗುವಂತೆ ಸೈನಿಕರಿಗೆ ಸೂಚಿಸಿ ಪಡೆವಳರು ಡಂಗುರ ಹೊಡೆಸುತ್ತಿದ್ದರು. ಮಾತ್ರವಲ್ಲ "ಬೆಳಗಪ್ಪ ಜಾವವೊಳ್ ಬೀಡು ವೀಡುಗಳ್ಗೆಲ್ಲಂ ತೋಟಿಲ್ದೇಕಿರ್ಪಿರೇಟಿಂ ಪಣ್ಣಿಮೆನೆ ತಂಡದೆ ಕೇಱಿ ಸಾಱುವ ಪಲರ್ ಪಡೆವಳ್ಳರ ಮಾತುಗಳ್ ಮನಂಗೊಂಡಿರೆ" (ಪಂಪಭಾ 10-49) ಎಂಬಲ್ಲಿ ಪಡೆವಳರ ಕರ್ತವ್ಯದ ಸೂಚನೆಯಿದೆ. ಸೂರ್ಯೋದಯಕ್ಕೆ ಮೊದಲೇ ಸೈನಿಕರನ್ನೆಲ್ಲ ಯುದ್ಧಕ್ಕೆ ಸಿದ್ಧರಾಗುವಂತೆ ಅವರು ಮಾಡಬೇಕಿತ್ತು. ಇಲ್ಲಿ "ಕೇಱಿ ಸಾಱುವ ಪಲರ್ ಪಡೆವಳ್ಳರ ಮಾತುಗಳ್"....ಎಂಬಲ್ಲಿ 'ಪಲರ್' ಎಂಬ ಪದ ಹಲವು ಪಡೆವಳರಿದ್ದ ಸೂಚನೆ ನೀಡುತ್ತದೆ. ಹೀಗಾಗಿ ಇವರು ಸೈನ್ಯದ ಯಾವುದೋ ಒಂದು ಭಾಗದ ಮುಖ್ಯಸ್ಥರಾಗಿರುವ ಸಾಧ್ಯತೆಯೂ ಇದೆ. 'ಕೇಱಿ ಸಾಱುವ' ಎಂಬ ಪದವು ಪಡೆವಳರು ಗಟ್ಟಿಯಾದ ಸ್ವರದಲ್ಲಿ ಸಾರುತ್ತಿದ್ದರೆಂಬ ಮಾಹಿತಿಯನ್ನು ನೀಡುತ್ತದೆ.

ಕೋಟೆಯುದ್ಧದ ಸಂದರ್ಭದಲ್ಲಿ ಈ ಪಡೆವಳರ ನಿರ್ದೇಶನದಂತೆ ಸೈನ್ಯವು ಮುತ್ತಿಗೆಯನ್ನು ಆರಂಭಿಸುತ್ತಿತ್ತು. "ಇಂತಿದು ಬೀಡುಂದಾಣಮೆಂದೊತ್ತಿದ ಪಡೆವಳರಿಂ ಮುತ್ತಿ ಬಿಟ್ಟತ್ತು ಸೈನ್ಯಂ" (ಅನಂಪು 11-8) ಎಂದು ಜನ್ನನಲ್ಲಿದೆ.

ಪಡೆವಳರಿಂದ ಯುದ್ಧ ಆರಂಭವಾಗುವ ದಿನದ ಸೂಚನೆ ದೊರೆತೊಡನೆ ಸೈನಿಕರು ತಮ್ಮ ಆಯುಧಗಳನ್ನು ಮಸೆದು ಹರಿತ ಮಾಡುತ್ತಿದ್ದರು. ಪಂಪನಲ್ಲಿ ಕೌರವನ ಕಡೆಯಿಂದ ಬಂದ ದೂತ "ಮಸೆಯಿಸುಗುಳ್ಳ ಕೆಯ್ದುಗಳನ್" (ಪಂಪಭಾ 10.32) ಎಂದು ಮಾತನ್ನಾರಂಭಿಸುವನು. ಆದಿಪುರಾಣದಲ್ಲಿ ಬರುವ "ಮಸೆಯಿಸ ಶಸ್ತ್ರಕೋಟಿ" (ಆದಿಪು 14-90) ಎಂಬ ಮಾತು ಸೈನಿಕರು ಆಯುಧಗಳನ್ನು ಮಸೆದು ಹರಿತ ಮಾಡುತ್ತಿದ್ದರೆಂಬುದನ್ನು ಸಮರ್ಥಿಸುತ್ತದೆ. 'ಮಸೆಯಿಸುವುಗ್ರ ಶಸ್ತ್ರನಿಚಯಂಗಳ್"

ಎಂಬ (ನೇಮಿಪು. 11-112) ನೇಮಿನಾಥ ಪುರಾಣದ ಹೇಳಿಕೆ ಪಂಪನ ಮಾತನ್ನು ಪೋಷಿಸುತ್ತದೆ. ಸೈನಿಕರು ಆಯುಧಗಳನ್ನು ಮಸೆದು ಹರಿತಮಾಡುವ ಸಂದರ್ಭದಲ್ಲಿ ಬೆಣಚುಕಲ್ಲಿನ ಪುಡಿಯನ್ನು ಬಳಸುತ್ತಿದ್ದರೆಂದು ತೋರುತ್ತದೆ. ಈ ಸಂದರ್ಭದಲ್ಲಿ ಏಳುತ್ತಿದ್ದ ಧೂಳಿನ ವರ್ಣನೆ (ಪಂಪಭಾ 10-35) ಪಂಪನಲ್ಲಿದೆ. ಸೈನಿಕರು ಆಯುಧಗಳನ್ನು ಥಳಥಳನೆ ಹೊಳೆಯುವಂತೆ ಮಸೆಯುತ್ತಿದ್ದರೆಂದು ತೋರುತ್ತದೆ. "ತಳಿತ ಕುಂತದ"....ಎಂಬ ಕುಮಾರವ್ಯಾಸನ ವರ್ಣನೆಯಲ್ಲಿ ಆಯುಧಗಳು ಹೊಳೆಯುತ್ತಿದ್ದ ಬಗ್ಗೆ ಮಾಹಿತಿಯಿದೆ. (ಕುವ್ಯಾವಿ 6.4)

ಇನ್ನೊಂದೆಡೆ ಅರಸರ ಶಿಬಿರಗಳಲ್ಲಿ ಚಟುವಟಿಕೆ ಆರಂಭವಾಗುತ್ತಿತ್ತು. ರಾಜರು ಮಂತ್ರಾಲೋಚನಾಸಭೆಯನ್ನು ಕರೆದು ನಾಳಿನ ಯುದ್ಧದಲ್ಲಿ ಶತ್ರುವನ್ನು ಹೇಗೆ ಎದುರಿಸಬೇಕು ಎಂಬುದರ ಬಗೆಗೆ ಆಲೋಚಿಸುತ್ತಿದ್ದರು. ಇಂತಹ ಸಭೆಯಲ್ಲಿ ಸೈನ್ಯದಲ್ಲಿರುವ ಅರಸುಮಕ್ಕಳೆಲ್ಲರೂ ಭಾಗವಹಿಸುತ್ತಿದ್ದರು. "ತನ್ನ ಪಡೆಯೊಳುಳ್ಳರಸುಮಕ್ಕಳೆಲ್ಲರುಮಂ ಬರಿಸಿ ನಾಳೆ ಕಾದುವವೆಂದು ಸಮಕಟ್ಟಿ" (ಬಂಹರಿ. 11-80ವ) ಎಂಬಲ್ಲಿ ಅರಸನ ಪಾಳೆಯದಲ್ಲಿ ಸಂಜೆ ಸೇರಿದ ಸಭೆಯ ಬಗ್ಗೆ ಮಾಹಿತಿಯಿದೆ. "ಹೊತ್ತು ಮುಳುಗುತ್ತಿದ್ದಂತೆ ಪದ್ಮನಾಭ ರಾಜನೂ ಅತ್ತ ಪೃಥ್ವೀಪಾಲ ರಾಜನೂ ತಂತಮ್ಮ ಓಲಗದ ಮಂಟಪದಲ್ಲಿ ಕುಳಿತು, ಇನ್ನು ನಡೆಯಲಿರುವ ಕಾಳಗದ ವಿಷಯವಾಗಿ ಅನ್ವಯಾಗತರೂ ರಣೋದ್ಯೋಗಿಗಳೂ ಆದ ವೀರ ಸಾಮಂತರೊಡನೆ ಕೆಲಕಾಲ ಚರ್ಚಿಸುತ್ತಿದ್ದು ಬಳಿಕ ನಿದ್ದೆ ಹೋದರೆಂದು" ಚಂದ್ರಪ್ರಭ ಪುರಾಣದಲ್ಲಿದೆ. (ಚಂದ್ರಪು. 10-59ವ) ಹೀಗೆ ರಾತ್ರಿ ಸೇರಿದ ಸಭಾಸ್ಥಾನದ ಚಿತ್ರ ಕುಮಾರವ್ಯಾಸನಲ್ಲಿಯೂ ಇದೆ. ದ್ರೋಣನ ಮರಣದ ಅನಂತರ ಮುಂದಿನ ಕಾರ್ಯತಂತ್ರವನ್ನು ರೂಪಿಸಲೆಂದು ಸೇರಿದ ಕೌರವನ ಸಭೆಯ ಚಿತ್ರವಿದು :

> ಒಡೆಯನಿದಿರಲಿ ಕುಳ್ಳಿರದೆ ಕೆಲ
> ಕಡೆಯ ಕೈದೀವಿಗೆಯ ನುರಿಯಲಿ
> ಮಿಡುಕವಿರ್ದುದು ರಾಯನೋಲಗದೊಳಗೆ ಪರಿವಾರ (ಕುವ್ಯಾಕ. 1-18)
> ಎಲೆ ಮಿಡುಕದಾಸ್ಥಾನ ವೀಳೆಯ
> ದೆಲೆಯ ಮಡಿಸುವ ರಭಸವಿಲ್ಲೊಳ
> ಗೊಳಗೆ ಸನ್ನೆಗಳೋರೆಗೊರಳುಗಳಾಡುಗಚ್ಚುಗಳ
> ಹಳಸಿದಗ್ಗಳಿಕೆಗಳ ಮೀಸಲು
> ಗಳದ ಬಿರುದಿನ ಮಾನಭಂಗದ
> ಕಳವಳದ ಕನಸುಗಳಲಿಪ್ಪುದು ರಾಯನಾಸ್ಥಾನ (ಕುವ್ಯಾಕ 1-20)

ಹೀಗೆ ದೊಂದಿಯ ಬೆಳಕಿನಲ್ಲಿ ಇರುಳಲ್ಲಿ ನಡೆವ ಸಭೆಯಲ್ಲಿ ಮೆಲ್ಲುವುದಕ್ಕೆಂದು ತಾಂಬೂಲವಿತ್ತು, ಇಂತಹ ಸಭೆಯಲ್ಲಿ ಸೇನಾನಿಗೆ 'ಬೀರವಟ್ಟ' (ವೀರಪಟ್ಟ)ವನ್ನು ಕಟ್ಟುತ್ತಿದ್ದರು. ಈ ಬಗ್ಗೆ ಪಂಪನಲ್ಲಿ ಸೂಚನೆಯಿದೆ. "ಶ್ವೇತನಿಗೆ ವೀರಪಟ್ಟಮನುದಾರಂ

ಕಟ್ಟಿದಂ ಧರ್ಮಜಂ" "ಅಂತು ವಿರಾಟ ನಂದನನಂ ಧರ್ಮನಂದನಂ ಸೇನಾ ನಾಯಕನಂ ಮಾಡೆ" (ಪಂಪಭಾ 10-34 ಮತ್ತು ವಚನ) ಈ ವೀರಪಟ್ಟವನ್ನು ಹಣೆಯ ಮೇಲೆ ಕಟ್ಟುತ್ತಿದ್ದರೆಂದು ತೋರುತ್ತದೆ. ಭೀಷ್ಮನ ಜೋಲುತ್ತಿದ್ದ ಹುಬ್ಬುಗಳನ್ನು ಎತ್ತಿ ಪಟ್ಟವನ್ನು ಅವುಗಳ ಮೇಲೆ ಕಟ್ಟಿದರೆಂದಿದೆ. ಇಡೀ ಸೈನ್ಯದಲ್ಲಿ ಅತ್ಯಂತ ಸಮರ್ಥರಾದವರಿಗೆ ಭಿನ್ನಾಭಿಪ್ರಾಯಕ್ಕೆ ಆಸ್ಪದವಿಲ್ಲದಂತೆ ವೀರಪಟ್ಟವನ್ನು ಕಟ್ಟುತ್ತಿದ್ದರು. ಮುದುಕನಾದ ಭೀಷ್ಮನಿಗೆ ಪಟ್ಟಕಟ್ಟುವುದರಿಂದೇನು ಪ್ರಯೋಜನ "ಎನಗೆ ಪಟ್ಟಂಗಟ್ಟಾ" ಎಂಬಲ್ಲಿ ಈ ಬಗ್ಗೆ ಸೂಚನೆಗಳಿವೆ. ಮಾತ್ರವಲ್ಲ, ಈ ರೀತಿ ವೀರಪಟ್ಟದ ಮಾನ್ಯತೆಗೆ ಪಾತ್ರರಾಗುವುದು ಗೌರವ ಮತ್ತು ಪ್ರತಿಷ್ಠೆಯ ವಿಷಯವಾದಂತಿದೆ.

"ಕರ್ಣಂಗೆ ಸೇನಾಪತಿ ಪಟ್ಟಂಗಟ್ಟಿ ರಣಭೇರಿಯಂ ಪೊಯ್ಯಲ್ವೇಳ್ದು" ಎಂದು ಬಂಧುವರ್ಮನ ಕೃತಿಯಲ್ಲಿದೆ. (ಬಂಹರಿ. 11-80ವ). ಕುಮಾರವ್ಯಾಸನಲ್ಲಿಯೂ 'ವೀರಪಟ್ಟ'ವನ್ನು ಭೀಷ್ಮನಿಗೆ ಶಾಸ್ತ್ರೋಕ್ತವಾಗಿ ಕಟ್ಟಿದ ಬಗೆಗೆ ಮಾಹಿತಿಯಿದೆ. (ಕುವ್ಯಾಭೀ 1-15, 30, 31, 32). ದ್ರೋಣನ ಅವಸಾನದ ಅನಂತರ ರಾತ್ರಿ ಸೇರಿದ ಓಲಗದಲ್ಲಿ ಕರ್ಣನಿಗೆ ವೀರಪಟ್ಟವನ್ನು ಕಟ್ಟಿದ ಚಿತ್ರ ಕಾವ್ಯದಲ್ಲಿದೆ. "ಮಿಗಿಲಾಯ್ತಿರುಳು ಕರ್ಣಗೆ ಪಟ್ಟವಾಯಿತು" ಎಂಬುದು ಕವಿಯ ಹೇಳಿಕೆ. (ಕುವ್ಯಾಕ. 2-30)

ಸಂಜೆಯಾಗುತ್ತಿದ್ದಂತೆ ಎರಡೂ ಕಡೆಯ ಯುದ್ಧಶಿಬಿರಗಳಲ್ಲಿ 'ರವಳಿ' ಘೋಷಿಸುತ್ತಿದ್ದರು. ಅದರ ಬೆನ್ನಿಗೇ ಯುದ್ಧಸೂಚಕವಾದ ದೀವಟಿಗೆಗಳನ್ನು ಬೀಸುತ್ತಿದ್ದರು. "ಅಗಳೆರಡುಂ ಬೀಡುಗಳೊಳಂ ಭೋರೆಂದಾರ್ದು ರವಳಿ ಘೋಷಿಸಿ ಕೊಳ್ಳಿವೀಸಿದಾಗಳ್" (ಪಂಪಭಾ 10. 35ವ) ಎಂದು ಪಂಪನಲ್ಲಿದೆ. ಕೌರವನ ಕಡೆಯಿಂದ ಬಂದ ದೂತನು ಧರ್ಮರಾಯನಲ್ಲಿ "ನಿರಂತರಂ ರವಳಿ ಘೋಷಿಸುಗೆ" (ಪಂಪಭಾ 10-32) ಎಂದಿದ್ದಾನೆ. 'ರವಳಿ ಘೋಷಿಸಿಯುಂ' ಎಂದು ಪೊನ್ನನಲ್ಲಿದೆ. (ಶಾಂತಿಪು 5-49ವ) ಪಂಪ ರಾಮಾಯಣದಲ್ಲಿಯೂ "ರವಳಿ ಘೋಷಿಸುವದಂದುಗದಿನಂದಿಸಿರುಳಂ ಕಳಿಯೆ" (ಪಂಪ.ರಾ 13-11ವ.) ಎಂದಿದೆ. ಕೆಲರಂ ತಟಿದ್ಯೋಷಣೆವಿಡಿಸಲ್ವೇಳ್ದು" ಎಂದು ಬಂಧುವರ್ಮನಲ್ಲಿದೆ ಸೂರ್ಯಾಸ್ತವಾಗುತ್ತಿದ್ದಂತೆ ಪಂಚಮಹಾವಾದ್ಯ, ಹಲವಾರು ಶಂಖ ಹಾಗೂ ಕಹಳೆಯ ಕೋಲಾಹಲದ ಧ್ವನಿ ಎರಡೂ ಸೈನ್ಯದಲ್ಲಿ ಉಂಟಾಯಿತೆಂದು ನೇಮಿನಾಥ ಪುರಾಣದಲ್ಲಿದೆ. (ನೇಮಿಪು. 11-123) ಹೀಗೆ ಎರಡೂ ಕಡೆಯ ಯುದ್ಧ ಶಿಬಿರಗಳಲ್ಲಿ ರವಳಿ ಘೋಷಣೆಯ ಮೂಲಕ ಸಂಜೆ ಯುದ್ಧದ ಪ್ರಕ್ರಿಯೆಯನ್ನು ಆರಂಭಿಸುತ್ತಿದ್ದರು.

'ರವಳಿ' ಘೋಷಣೆಯೊಂದಿಗೆ ಕೊಳ್ಳಿ ಬೀಸುತ್ತಿದ್ದರು. "ಅಲಾತಂ ಉಲ್ಮುಕಂ ಈ ತಿ ಕೊಳ್ಳಿ" (ಹಲಾಯುಧ 11. 67) ಎಂದಿದೆ. ಅಂದರೆ ಯುದ್ಧವನ್ನು ಆರಂಭಿಸುವುದರ ಸಂಕೇತ ಉರಿವ ಕೊಳ್ಳಿಯನ್ನು ಬೀಸುವುದರ ಮೂಲಕ ಸೂಚನೆ ನೀಡು

ತ್ತಿದ್ದರು. "ಆ ರಭಸಕ್ಕೆ ರೌದ್ರಮನೆ ಕೊಳ್ಳಿವೀಸಿಸೆ" "ಕೊಳ್ಳಿನೆ ಕೊಳ್ಳಿವೀಸೆ ಪಡೆಯಂ ದೆರಡುಂ ದಿಗಧೀಶರೋಡಿದರ್" (ನೇಮಿಪು 11. 123) ಎಂದು ಕಾವ್ಯದಲ್ಲಿದೆ. ಪೊನ್ನನಲ್ಲಿ "ಇರುಳೊಳ್ ಕೊಳ್ಳಿವೀಸಿಸಿಯುಂ" (ಶಾಂತಿಪು. 5. 49 ವ) ಎಂದಿರುವುದರಿಂದ ಕತ್ತಲಾದ ಮೇಲೆ ಕೊಳ್ಳಿ ಬೀಸುತ್ತಿದ್ದರೆಂಬುದು ಸ್ಪಷ್ಟ. ಬಂಧುವರ್ಮನ ಕಾವ್ಯ ದಲ್ಲಿಯೂ "ಕೆಲರನಿರುಳೊಳ್ ಕೊಳ್ಳಿವೀಸಿಸಲ್ವೇಬ್ಬು" ಎಂದಿದೆ. (ಬಂಹರಿ 11. 80ವ). ಪಂಪನಲ್ಲಿ ರವಳಿ ಘೋಷಿಸಿ ಬಳಿಕ ಕೊಳ್ಳಿವೀಸಿದಾಗಳ್' (ಪಂಪಭಾ 10. 35ವ) :

> ಉರಿಮುಟ್ಟಿದರಳೆಯಂತಂ
> ಬರಮುರಿದತ್ತಜನ ಪದ್ಮವಿಷ್ಟರದೆಸಳಂ
> ದರೆ ಸೀದುವಖಿಳ ದಿಗ್ದ್ವಿರ
> ದರದಂಗಳ್ ಕರಮೆ ಕರಿಪುಗಾಱಿದುವಾಗಳ್ (ಪಂಪಭಾ. 10. 36)

"ಬೆಂಕಿ ತಗುಲಿದ ಹತ್ತಿಯಂತೆ ಆಕಾಶವು ಉರಿದುಹೋಯಿತು. ಬ್ರಹ್ಮನಕಮಲಾಸನದ ದಳಗಳು ಅರ್ಧ ಸುಟ್ಟವು. ಎಲ್ಲ ದಿಗ್ಗಜಗಳ ದಂತಗಳೂ ವಿಶೇಷವಾಗಿ ಕರ್ರಗಾದವು" ಎಂಬ ವರ್ಣನೆಯಿದೆ. ಅಂದರೆ ಸೈನಿಕರಲ್ಲಿ ಕೆಲವರು 'ಏಕಕಾಲಕ್ಕೆ ಕೊಳ್ಳಿಯನ್ನು ಮೇಲೆತ್ತಿ ಬೀಸುತ್ತಿದ್ದಿರಬೇಕು. ಸೈನಿಕರು ಯುದ್ಧಕ್ಕೆ ಸಿದ್ಧರಾಗುತ್ತಿರುವುದನ್ನು ಕೊಳ್ಳಿ ಬೀಸುವುದರ ಮೂಲಕ ವೈರಿಗಳಿಗೆ ಸೂಚನೆ ನೀಡುತ್ತಿದ್ದಂತೆ ತೋರುತ್ತದೆ. ಹೀಗೆ ಕೊಳ್ಳಿ ಬೀಸಿದ ಬಳಿಕ ಅರಸರು ಹಾಗೂ ಸೈನಿಕರು ಆಯುಧ ಹಾಗೂ ತಮ್ಮ ಇಷ್ಟ ದೇವತಾರ್ಚನೆ, ದಾನ ಮೊದಲಾದ ಕೆಲಸದಲ್ಲಿ ತೊಡಗುತ್ತಿದ್ದರು.

ಮೂಲ ಮಹಾಭಾರತದಲ್ಲಿ ಭೀಷ್ಮನು ತನಗೆ ಪಟ್ಟಕಟ್ಟಿದ ಮೇಲೆ "ದೇವ ಸೇನಾ ನಾಯಕನಾದ, ಶಕ್ತ್ಯಾಯುಧವನ್ನ ಧರಿಸಿರುವ ಕುಮಾರಸ್ವಾಮಿಗೆ ಮೊದಲು ನಮಸ್ಕ ರಿಸಿ, ನಾನು ನಿನ್ನ ಸೈನ್ಯದ ಪ್ರಧಾನ ದಂಡನಾಯಕನಾಗುತ್ತೇನೆ" ಎಂದು ಕೌರವನಿಗೆ ಹೇಳಿದ್ದಾನೆ. ಕನ್ನಡ ಕಾವ್ಯದಲ್ಲಿ ಯುದ್ಧಕ್ಕೆ ಮೊದಲು ದೇವತಾರ್ಚನೆ ಮಾಡಿದ್ದರ ಬಗೆಗೆ ಸಾಕಷ್ಟು ಮಾಹಿತಿ ದೊರೆಯುತ್ತದೆ.

ಪಂಪಭಾರತದಲ್ಲಿ 'ಅರ್ಚಿಸುಗಾನೆಗಳಂ ತಗುಳ್ದು ಪೂಜಿಸುಗೆ ವಿಶುದ್ಧವಾಜಿಗಳ ನಾಜಿಗೆ" ಎಂಬ ಹೇಳಿಕೆಯಿದೆ. ಕೌರವನ ಕಡೆಯಿಂದ ಬಂದ ದೂತ ಹೇಳುವ ಮಾತಿನಲ್ಲಿ ಯುದ್ಧ ಶಿಬಿರದಲ್ಲಿ ರಾತ್ರಿ ನಡೆಯುತ್ತಿದ್ದ ಕಾರ್ಯಕ್ರಮದ ವಿವರವಿದೆ. ಯುದ್ಧದ ಹಿಂದಿನ ದಿನ ರಾತ್ರಿ ಯೋಧರು ತಮ್ಮ ಇಷ್ಟದೇವತೆಗಳನ್ನು ಪೂಜಿಸಿ ತಮ್ಮ ಆಯುಧ, ಆನೆ, ಕುದುರೆಗಳನ್ನು ಅರ್ಚಿಸುತ್ತಿದ್ದರು. ಪಂಪನ ಆದಿಪುರಾಣದಲ್ಲಿ ಅಟ್ಟಿಯಿಂದ ಮರ್ಚಿಸುವ ತುರಂಗದಂತಿರಥಸಂಕುಳಂ........ ಪೂಜಿಸುವ ಜಿನೇಂದ್ರ ಬಿಂಬಂ" ಎಂದಿದೆ. (ಆದಿ ಪು. 14-90) ಇಲ್ಲಿ ಜೈನನಾದ ಪಂಪ ತನ್ನ ಅಲೌಕಿಕ ಕಾವ್ಯದಲ್ಲಿ ಧರ್ಮಕ್ಕನು ಗುಣವಾಗಿ ಜಿನೇಂದ್ರಬಿಂಬವನ್ನು ಪೂಜಿಸುವನು. ಆದರೆ ವಿಕ್ರಮಾರ್ಜುನವಿಜಯದಲ್ಲಿ "ಭದ್ರಮನನುಮುಪ್ಪ ವಿಜಯಗಜಮುಮನಕ್ಷಯ ರಥಾಶ್ವಕೇತನ ಶರಾಸನ ಶರಧಿ ವಿಚಿತ್ರ

ತನುತ್ರ ವಿವಿಧಾಸ್ತ್ರಶಸ್ತ್ರಗಳುಮಂ ಗಂಧ ಧೂಪ ದೀಪಾದಿಗಳಿಂದರ್ಚಿಸಿ ಪೊಡೆವಟ್ಟಾಗಳ್" (ಪಂಪ ಭಾ 10-46ವ) ಎಂಬಲ್ಲಿ ಸಮಗ್ರವಾದ ಪೂಜೆಯ ವಿವರವಿದೆ. ಪೊನ್ನನಲ್ಲಿ ಶಸ್ತ್ರಪೂಜೆಯು ಚಿತ್ರವಿಲ್ಲಗಿಸ್ಪರೂ ಇರುಳಿನ "ನಾಲ್ಕುಜಾವಮುಮನುವರಮನೆ ಸಮಕಟ್ಟುತ್ತುಮಿರೆಯಿರೆ" (ಶಾಂತಿಪು. 5-49ವ) ಎಂದಿದೆ. ಇರುಳಿನ ನಾಲ್ಕು ಜಾವದವರೆಗೆ ಕಾಳಗವನ್ನು ಅಣಿಗೊಳಿಸುತ್ತಿದ್ದರು ಎಂಬಲ್ಲಿ ಪೂಜೆಯೂ ಸೇರಿರಬಹುದು. ಯುದ್ಧ ಸನ್ನದ್ಧವಾದ ಕೃಷ್ಣನ ಸೈನ್ಯದಲ್ಲಿ ಆನೆ, ಕುದುರೆ ಹಾಗೂ ಮಹಾಪ್ರಚಂಡವಾದ ದಿವ್ಯಾಸ್ತ್ರಗಳಿಗೆ ಸೈನಿಕರು ಪೂಜಿಸುವ ವರ್ಣನೆಯಿದೆ. (ನೇಮಿ ಪು. 11-112) "ಸಂಗ್ರಾಮ ಭೇರಿಯಂ ಪೊಯ್ಸಿ ಇಷ್ಟದೇವತಾರ್ಚನ ಪುರಸ್ಸರಂ ಶಾರ್ಙ್ಗಯುಧಮಾದ್ಯನೇಕಾಯುಧಮಂ ಪೂಜಿಸುತ್ತಿರ್ದನ್" ಎಂದು ಬಂಧುವರ್ಮನಲ್ಲಿದೆ. (ಬಂಹರಿ 11-79ವ) ಇನ್ನೊಂಡೆಡೆ ಚಕ್ರಂ ಮೊದಲಾಗಾಯುಧ ವಾಹನಂಗಳನರ್ಚಿಸುತ್ತಮಿರ್ದರಂದಿನದೆವಸ ಮೆರಡುಂ ಪಡೆಯ ಸುಭಟರಿಷ್ಟದೇವತಾಯುಧಂಗಳಂ ಪೂಜಿಸುತ್ತಂ" (ಬಂಹರಿ 11-80ವ) ಇದ್ದರೆಂದಿದೆ. "ಇಂತತಿ ಪ್ರಬಲಮಪ್ಪುಭಯ ಬಲಮುಮಾಯುಧಂಗಳನರ್ಚಿಸುವ ವಿಜಯ ವಾರಣ ವಾಜಿಗಳಂ ಪೂಜಿಸುವ" (ಪಂರಾಮಾ 13-11ವ) ಎಂದು ಇನ್ನೊಂದಡಗಿದೆ.

ಕುಮಾರವ್ಯಾಸನಲ್ಲಿ "ಕರ್ಣನಾಯುಧ ಶಾಲೆಯಲಿ ಶುಚಿಯಾಗಿ ಶಸ್ತ್ರಾಸ್ತ್ರವನು ಪೂಜಿಸಿದ" ಎಂದಿದೆ. (ಕುವ್ಯಾಕ 8-7) ಮಾತ್ರವಲ್ಲ ಇಲ್ಲಿ ಕುರಿ, ಕೋಳಿ, ಕೋಣ ಬಲಿಯನ್ನು ನೀಡಿದ ಬಗ್ಗೆ ಮಾಹಿತಿಯಿದೆ.

ಕುರಿಯ ಹಣಿದದ ಕೋಳಿ ಕೋಣನ
ಮುರಿದಲೆಯ ಮೀಸಲಿನ ರಕುತದ
ಪುರುಡುರಿಪ ದಂಡೆಯಲಿ ಕಲಸಿದ ಕೂಳ ಮುದ್ದೆಗಳ
ಹೊರಗೆ ಬಡಿಸಿದ ಭೂತಬಲಿ ಬೊ
ಬ್ಬಿರಿತದೊಡನುಬ್ಬೇಳ್ವ ಲಗ್ಗೆಯ
ಪರೆಗಳಬ್ಬರವಾಯ್ತು ಕರ್ಣನ ಶಸ್ತ್ರಪೂಜೆಯಲಿ (ಕುವ್ಯಾಕ 8-8)

ಎಂಬ ಕವಿಯ ವರ್ಣನೆಯಲ್ಲಿ ಸ್ಪಷ್ಟವಾಗಿ ಪ್ರಾಣಿಬಲಿ ನೀಡಿದ ಸೂಚನೆಗಳಿವೆ. ರಣದೇವತೆಯನ್ನು ತೃಪ್ತಿಪಡಿಸಲೆಂದು ಸೈನಿಕರು ಪ್ರಾಣಿಬಲಿ ನೀಡುತ್ತಿದ್ದರೆಂದು ತೋರುತ್ತದೆ ಈ ರೀತಿ ವಿಜಯಾಕಾಂಕ್ಷಿಯಾಗಿ ಮಾಡುವ ಎಲ್ಲಾ ಕೆಲಸಗಳನ್ನೂ 'ವಿಜಯೋದ್ಯೋಗ' ಎಂದು ಕರೆಯಲಾಗಿದೆ. (ಪಂಪಭಾ 10-48ವ)

ಪಂಪನ ಆದಿಪುರಾಣದಲ್ಲಿ "ವಿಜಯ ದರ್ಭಶಯ್ಯೆ" ಎಂದಿದೆ. (ಆದಿ ಪು 14.90) "ಕೆಯ್ದುಗಳನರ್ಚಿಸಿ ದರ್ಭಶಯನಂ ಮಾಡಿ" ಎಂದು ಪಂಪಭಾರತದಲ್ಲಿದೆ. (ಪಂಪ ಭಾ 10-44ವ) "ದರ್ಭಶಯ್ಯೆ" ಎಂದರೆ ದರ್ಭೆಯಿಂದ ಮಾಡಿದ ಹಾಸಿಗೆ ಎಂದರ್ಥ. ವಿಜಯೋದ್ಯೋಗವನ್ನು ಕೈಗೊಂಡ ಯೋಧರು ಅಂದು ರಾತ್ರಿ ದರ್ಭೆಯ ಹಾಸಿಗೆಯ ಮೇಲೆ

ಮಲಗುತ್ತಿದ್ದುದು ತಿಳಿದಿದೆ. ನೇಮಿನಾಥ ಪುರಾಣದಲ್ಲಿ ಕೆಲವರು ವೀರರು ಎಲ್ಲವನ್ನೂ ತೊರೆದು ಬಿಡುವುದರಲ್ಲಿ ತೊಡಗಿದ್ದರೆಂದಿದೆ. "ಕೆಲರ್ ವೀರಸನ್ಯಾಸನರಾಗಿರೆಯುಮಾ ಸಮಯದೊಳ್" (ನೇಮಿ ಪು. 11–123ವ) ಎಂಬ ಉಲ್ಲೇಖವಿದೆ. "ವೀರ ಸಂನ್ಯಸನ ಮಿರ್ಪ" ಎಂಬ ಹೇಳಿಕೆ ಪಂಪರಾಮಾಯಣದಲ್ಲಿದೆ. (ಪಂಪರಾ 13–11ವ) "ರವಿಸೂನು ದರ್ಭಾಂಕುರದ ಶಯನಸ್ಥಾನದಲಿ ಮಾಡಿದನು ಜಾಗರವ" (ಕುವ್ಯಾಕ 8–9) ಎಂಬಲ್ಲಿ ದರ್ಭೆಯ ಹಾಸಿಗೆಯಲ್ಲಿ ಯೋಧರು ರಾತ್ರಿಯನ್ನು ಕಳೆಯುತ್ತಿದ್ದ ಸ್ಪಷ್ಟ ಸೂಚನೆಯಿದೆ. ಹೀಗಾಗಿ ವಿಜಯೋದ್ಯೋಗವನ್ನು ಕೈಗೊಂಡ ಯೋಧರು ಅಂದಿನ ರಾತ್ರಿಯನ್ನು ವ್ರತಾನುಷ್ಠಾನರಾಗಿ ಕಳೆಯುತ್ತಿದ್ದರು.

ಯುದ್ಧದಲ್ಲಿ ಮರಣ ಹೊಂದಿದ ವೀರನನ್ನು ದೇವಾಂಗನೆಯರು ಸ್ವರ್ಗ ಇಲ್ಲವೆ ಶಿವನೋಲಗಕ್ಕೆ ಕರೆದೊಯ್ಯುವರೆಂಬ ನಂಬಿಕೆ ಜನತೆಯಲ್ಲಿತ್ತು. ಸೂರ್ಯಮಂಡಲವನ್ನು ಭೇದಿಸಿ ಮೇಲೆ ಹೋಗಬಲ್ಲವರು ಇಬ್ಬರು ಮಾತ್ರ. ಪರಿವ್ರಾಟನಾದ ಯೋಗಿ, ಹೋರಾಡುತ್ತ ಸತ್ತ ವೀರ ಎಂಬರ್ಥ ಬರುವ ಉಕ್ತಿಯೊಂದು ಶಾಸನವೊಂದರಲ್ಲಿದೆ.

> ದ್ವಾವಿಮೆತ್ರಾ ಪುರುಷೌ ಲೋಕೇ ಸೂರ್ಯಮಂಡಲ ಭೇದಿನೌ
> ಪರಿವ್ರಾಡ್ಯೋಗಯುಕ್ತಶ್ಚ ರಣೇಚಾಭಿಮುಖೇ ಹತಃ
>
> (EC VII SK. 307–1015 AD)

ಹೀಗೆ ವೀರರು ತಮ್ಮನ್ನು ಯೋಗಿಗೆ ಸಮನಾದ ವ್ಯಕ್ತಿಗಳೆಂದು ಭಾವಿಸಿದ್ದರು. ಅಂದಿನ ಸಮಾಜ ಅವರನ್ನು ಅದೇ ರೀತಿಯಲ್ಲಿ ಗೌರವಿಸುತ್ತಿತ್ತು. ಆದ್ದರಿಂದ ಯುದ್ಧಕ್ಕೆ ಹೊರಟ ವೀರರಲ್ಲಿ ಅನೇಕರು ಕಟ್ಟುನಿಟ್ಟಿನ ವ್ರತಾಚರಣೆಯಲ್ಲಿದ್ದು, ಭೋಗ ಜೀವನವನ್ನು ತೊರೆದು ಸನ್ಯಾಸಿಗಳಂತೆ ದರ್ಭೆಯ ಮೇಲೆ ಮಲಗುತ್ತಿದ್ದರೆಂದು ಭಾವಿಸಬಹುದು.

ಇಷ್ಟದೇವತೆಗಳನ್ನು ಅರ್ಚಿಸಿದ ಬಳಿಕ ಯೋಧರು ದಾನ ಮಾಡುತ್ತಿದ್ದರು. "ಸುಭಟರಿಷ್ಟ ದೇವತಾಯುಧಂಗಳಂ ಪೂಜಿಸುತ್ತಂ ದಾನ ಸನ್ಮಾನಂಗಳಂ ವಿರಾಜಿಸುತ್ತ ಮಿರ್ದರ್" ಎಂದು ಕಾವ್ಯದಲ್ಲಿದೆ. (ಬಂಹರಿ 11–80 ವ) ಪಂಪನಲ್ಲಿಯೂ ಈ ಬಗ್ಗೆ ಸ್ಪಷ್ಟ ಉಲ್ಲೇಖವಿದೆ. :

> ಉಡಲುಂ ತುಡಲುಂ ವಸ್ತ್ರಂ
> ತುಡುಗೆಯನಾನೆಯುಮನರ್ಥ ಸಂತತಿಗೀಯಲೆ
> ಬಿಡುವೊನ್ನುಮನಾಳ್ಗಟ್ಟುವ
> ತೊಡರೊಳ್ ತೊಡರ್ಪಿರ್ದರರಸು ಮಕ್ಕಳ್ ಕೆಲಬರ್ (ಪಂಪ ಭಾ 10–38)

ಎರಡೂ ಕಡೆಯ ಸೈನ್ಯದಲ್ಲಿ 'ಮನ್ನಣೆಯ ವೀರಭಟರ್ಗೆ' ಪ್ರಭುಗಳು ಉದಾರ ಮನದಿಂದ ವಸ್ತ್ರಾಲಂಕಾರವನ್ನು ನೀಡುತ್ತಿದ್ದರು. ಹೊನ್ನನ್ನು ದಾನಮಾಡುತ್ತಿದ್ದರು. (ನೇಮಿ ಪು 11–113, 114ವ) ಕರ್ಪೂರದ ವೀಳೆಯವನ್ನು ಕರ್ಣನು ಸೈನಿಕರಿಗೆ ನೀಡಿದನೆಂದು ಕುಮಾರವ್ಯಾಸನಲ್ಲಿದೆ. (ಕುವ್ಯಾ ಕ 8–33) ಹೀಗಾಗಿ ಯುದ್ಧ ಶಿಬಿರಗಳಲ್ಲಿರುವ ಯೋಧರು "ರಿಣಮಂ ನೀಗಲು ಮಿರ್ದರ್" (ಬಂಹರಿ 11–80ವ) ಎಂಬ ಮಾತಿಗೆ ಔಚಿತ್ಯವಿದೆ.

ರಾಯನ ಮನ್ನಣೆಗೆ ಮನವುಬ್ಬಿ ಯಾವ ಭಟತಾನೆ ರಣದಲ್ಲಿ ಸಾವಿನ ಮುಖಕ್ಕೆ ನುಗ್ಗದೆ ಹಿಂದೆ ಸರಿದಾನು ? ಹಾಗೆ ಹಿಂಜರಿದು ಬದುಕುವ ನಾಯಿಗೆ ಇಹಪರಗಳು ದಕ್ಕಿಯಾವೆ ? (ಕುವ್ಯಾ ಕ 8–33) ಎಂಬ ಪ್ರಶ್ನೆಗೆ ವೀರಯುಗದ ಮನೋಧರ್ಮದ ಹಿನ್ನೆಲೆಯಲ್ಲಿ ಅರ್ಥವಿದೆ. ವ್ಯಾಸಭಾರತದಲ್ಲಿ ಯುಧಿಷ್ಠಿರನು ಸೈನಿಕರನ್ನು ಯಥಾಯೋಗ್ಯವಾಗಿ ಪುರಸ್ಕರಿಸಿ ರಣಾಂಗಣಕ್ಕೆ ಕಳಿಸಿದ ಚಿತ್ರವಿದೆ. ಯುದ್ಧರಂಗದಲ್ಲಿ ಅರ್ಜುನನ ಠಾವು ತೋರಿದರೆ ಬಹುಮಾನ ನೀಡುವುದಾಗಿ ಕುಮಾರವ್ಯಾಸನ ಕರ್ಣ ಸೈನಿಕರಲ್ಲಿ ಘೋಷಣೆ ಮಾಡುವನು. ಯುದ್ಧರಂಗದಲ್ಲಿ ಮುನ್ನುಗ್ಗಿ ಹೋರಾಡಲು ಯೋಧರಿಗೆ ಉತ್ಸಾಹ ತುಂಬುವ ದೃಷ್ಟಿಯಿಂದ ಇಂತಹ ಹೇಳಿಕೆಗಳನ್ನು ಸೇನಾಪತಿಗಳು ಅಥವಾ ರಾಜರು ಹೇಳುತ್ತಿದ್ದರೆಂದು ತೋರುತ್ತದೆ. ಮಾತ್ರವಲ್ಲ, ಈ ಪದ್ಧತಿ ತುಂಬಾ ಹಿಂದಿನಿಂದಲೂ ಬಳಕೆಯಲ್ಲಿತ್ತು. ರಾಜ, ಮಂತ್ರಿ, ಸೇನಾಪತಿಯನ್ನು ಕೊಂದರೆ ನಿಯುತ ಇತ್ಯಾದಿ ಬಹುಮಾನವನ್ನು ಘೋಷಿಸಿ ಸೈನಿಕನಲ್ಲಿ ಉತ್ಸಾಹ ತುಂಬಬೇಕು ಎಂದು ಸೋಮದೇವನ ಅಭಿಲಷಿತಾರ್ಥ ಚಿಂತಾಮಣಿಯಲ್ಲಿದೆ. (ಪು. 164). ಇಂತಹ ಸಂದರ್ಭಗಳಲ್ಲಿ ರಾಜರು ತಂತಮ್ಮ ಯುದ್ಧಲೀಲೆಯನ್ನು ಉದಾಹರಿಸಿ ಹೇಳುತ್ತಿದ್ದ ವರ್ಣನೆ ಕಾವ್ಯವೊಂದರಲ್ಲಿದೆ. (ನೇಮಿಪು 11–123ವ) ಇದನ್ನು 'ಸುಭಟಾಲಾಪ' ಎಂದು ಪಂಪರಾಮಾಯಣದಲ್ಲಿ ಹೇಳಿದೆ. (ಪಂಪ ರಾ 13–11ವ)

ಒಡೆಯರಿಂದ ಹೊನ್ನು, ವಸ್ತ್ರ ಮೊದಲಾದವುಗಳನ್ನು ಪಡೆದ ವೀರಯೋಧರು ರಾಜನೆದುರು ಪ್ರತಿಜ್ಞೆಯನ್ನು ಮಾಡುತ್ತಿದ್ದರು ಇಂತಹ ಯೋಧರು ವೀರತನದಿಂದ ಮಾಡುವ ಘೋಷಣೆಯನ್ನು ಪಂಪ ತನ್ನ ಕೃತಿಯಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ. "ನಾಳೆ ನಡೆಯುವ ಗಜಯುದ್ಧದಲ್ಲಿ ಎಲ್ಲರಿಗಿಂತಲೂ ಮೊದಲು ಶತ್ರು ಸೈನ್ಯವನ್ನು ಎದುರಿಸುತ್ತೇನೆ. ಈ ಸಂದರ್ಭದಲ್ಲಿ ತಲೆ ಹೋದರೂ ಮುಂಡವೇ ಶೂರರನ್ನು ಬೆನ್ನಟ್ಟಿ ಕತ್ತರಿಸಬಲ್ಲದು. ಹಾಗೆ ಮಾಡದಿದ್ದರೆ ನಾನು ಹೆದರಿದೆನೆಂದು ತಿಳಿ" ಎಂಬುದು ವೀರನೊಬ್ಬನ ಪ್ರತಿಜ್ಞೆ. ಈತನ ಮಾತಿನ ವೈಖರಿಯನ್ನು ನೋಡಿದರೆ ಈತ ಗಜಯೋಧನಾಗಿರಬೇಕೆನಿಸುತ್ತದೆ.

ಇನ್ನೊಬ್ಬ ಯೋಧನು 'ತನ್ನನಾಳ್ದಂ ಪೆರ್ಚಿ ಪೊರೆದುದರ್ಕೆ ಕರಂ ಮೆಯ್ವೆರ್ಚಿ ನುಡಿದಂ'. "ನಿನ್ನ ದಯೆ ಹಾಗೂ ನನ್ನ ಪರಾಕ್ರಮವನ್ನು ಆನೆಯ ದಂತದ ತಕ್ಕಡಿಯಲ್ಲಿ ಇಟ್ಟು ಇವೆರಡರಲ್ಲಿ ಯಾವುದು ಶ್ರೇಷ್ಠವೆಂದು ನಾನೇ ತೂಗಿ ತೋರಿಸುತ್ತೇನೆ" ಎಂದು ತನ್ನ "ನೆರಗುಂ ಬೆರಗುಮಿಲ್ಲದ ಕಲಿತನಮುಜೀಯೆ ನುಡಿದಂ" ಮತ್ತೊಬ್ಬ ಯೋಧನು "ಎರಡುಂ ಬಲಿವೆನ್ನನೆ ನೋಡೆ ತಕ್ಕಿನೆನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ" (ಪಂಪ ಭಾ 10.41) ಎಂದು ಹೇಳುವನು. ಹೀಗೆ ಸೈನಿಕರು ವೀರಾವೇಶದಿಂದ ಮಾತನಾಡುವ ಚಿತ್ರ ನೇಮಿನಾಥ ಪುರಾಣದಲ್ಲಿಯೂ ಬಂದಿದೆ. ಈ ಸಂದರ್ಭದಲ್ಲಿ ಬಿಲ್ವಿದ್ಯೆಯಲ್ಲಿ ಪ್ರವೀಣನಾದ ಯೋಧನೊಬ್ಬನು " ಬಾಣ

ಗಳಿಂದ ಶತ್ರು ಸೈನ್ಯವನ್ನು ಕಾಣುವುದೇ ಸಾಧ್ಯವಿಲ್ಲ" ವೆಂಬಂತೆ ಆ ಕಡೆಯ ರಾಜ ರಿಂದಲೇ ನಾನು ಧನುರ್ವಿದ್ಯಾ ನಿಪುಣನೆಂದು ಹೊಗಳಿಸಿಕೊಳ್ಳುವೆ" ಎಂದನು (ನೇಮಿ ಪು 11.113) ಇದೇ ರೀತಿ ಅಶ್ವಾರೋಹಿಗಳು, ವೀರಭಟರು ತಮ್ಮ ತೋಳ್ಬಲ ವನ್ನು ನಾಳಿನ ಯುದ್ಧದಲ್ಲಿ ಇನ್ನಿಲ್ಲದ ರೀತಿಯಲ್ಲಿ ಪ್ರದರ್ಶಿಸುವುದಾಗಿ ಘೋಷಿಸುವರು. ಬಿಲ್ವಿದ್ಯೆಯಲ್ಲಿ ಅಪಾರ ಪರಿಶ್ರಮ, ಪ್ರೌಢತೆಯನ್ನು ಯುದ್ಧರಂಗದಲ್ಲಿ ಪ್ರದರ್ಶಿಸುವ ಯೋಧರನ್ನು ಬಿರುದು ಸಹಿತ ಹೊಗಳುತ್ತಿದ್ದರು. "ವೀರ ಧಣು ಧಣು ಪೂತುರೇ ಬಿಲುಗಾರ ಮಝುರೇ ಚಾಪತಂತ್ರ ವಿಶಾರದಾ" ಎಂದು ಪರಸ್ಪರ ಬಿಲ್ವಿದ್ಯೆಯ ಕೌಶಲ ವನ್ನು ಪ್ರಶಂಸಿಸಿದ ಚಿತ್ರ ಕುಮಾರವ್ಯಾಸನಲ್ಲಿದೆ (ಕುವ್ಯಾ ಭೀ 4.19)

ಬಂಧುವರ್ಮನ ಹರಿವಂಶಾಭ್ಯುದಯದಲ್ಲಿ ಯೋಧರ ವೀರಸಿದ್ಧಾಂತದ ಬಗೆಗೆ ದೀರ್ಘವಾದ ವಿವರಣೆಯಿದೆ. "ಕೆಲರ್ ತುಱಿಲಸಂದಿಕೆಯ ಪಸುಗೆಗಳಂ ಮುನ್ನ ಱಿಯದೆ ನೆಗೞ್ದೀಗಳಣ್ಮಿ ಸತ್ತೊಡೆ ಕಲಿಯಕ್ಕುಂ ತುಱಿಲಸಂದನಾಗಲಱಿಯರೆನು ತಿರ್ದರದಂ ಕೇಳ್ದೊರ್ಬನೆಂದಂ, ಸತ್ತೊಡೆ ತುಱಿಲಸಂದೊನಾಗಂ ಕಲಿಯಕ್ಕುಮೆಂಬೈ ಕಲಿತನಂ ತುಱಿಲ ಸಂದಿಕೆಯೊಳಗಲ್ತೆಯೆಂದೊಡೊಂದು ಗುಣಮಲ್ತದುವೆರಸಾಱುಂ ಗುಣಂಗಳಂ ನೆಱೆಯೆ ಕೈಕೊಂಡು ನೆಗೞ್ದವನಲ್ಲದೆ ತುಱಿಲಸಂದನೆಂಬ ಪೆಸರಂ ಪಡೆಯ ನದೆಂತೆನೆ :

> ಕಲಿತನವಭಿಮಾನಂ ನಿ
> ರ್ಮಳ ಧರ್ಮಂ ತ್ಯಾಗಮೆಸೆವ ಸತ್ಯಂ ಶೌಚಂ
> ನೆಲಸಿರ್ದೀ ಗುಣಮಾಱುಂ
> ನೆಲೆಯುಳ್ಳಂ ತುಱಿಲಸಂದನಲ್ಲದಡಲ್ಲಂ (ಬಂಹರಿ 11. 81)

ಕಲಿತನ, ಸತ್ಯ, ಶೌಚ, ಅಭಿಮಾನ, ಅಶ್ರಯದಾತಗುಣ, ಧರ್ಮವನ್ನು ವೀರನಾದವನು ಮೈಗೂಡಿಸಿಕೊಂಡಿರಬೇಕು. ಇಲ್ಲಿನ ವಿವರಗಳಲ್ಲಿ ಪಂಪನ ದಟ್ಟಪ್ರಭಾವವನ್ನು ಗುರುತಿಸ ಬಹುದು. "ವೀರಸಿದ್ಧಾಂತಮಂತಪ್ಪ ಗುಣಂಗಳನುಳ್ಳಾತಂ ಮೇಗರಸನಕ್ಕೆ ಕೆಳಗೆ ಪೊಲೆಯನಕ್ಕಾವ ಕುಲಮಾದೊಡಂ ತುಱಿಲಸಂದನೆಂಬೊನಕ್ಕುಮಂತಪ್ಪಾತಂ ಕಿಱು ಕುಳನುಂ ಕಡ್ಡನುಮಾಗಲಾಗ ಧೈರ್ಯವಂತನಪ್ಪುದುಂ, ಎಂಬಲ್ಲಿ 'ಕುಲಂ ಕುಲಮಲ್ತು' ಎಂದು ಸ್ವೀಕೃತವಾಗುತ್ತಿರುವ ಹೊಸ ಮೌಲ್ಯದ ಸೂಚನೆಯಿದೆ. ಕುಲ ಯಾವುದಾ ದರೇನು? ಶೌಚ ಸಹಿತನಾಗಿ ಧೀರನಾಗಿರಬೇಕು ಎಂಬ ಮಾತು ಸೈನಿಕ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಾಗುತ್ತಿರುವ ಬದಲಾವಣೆಯನ್ನು ಸೂಕ್ಷ್ಮವಾಗಿ ಗುರುತಿ ಸುತ್ತದೆ. ಇಲ್ಲಿನ 'ವೀರಸಿದ್ಧಾಂತ' ಎಂಬ ಹೇಳಿಕೆಯಂತೂ ಪಂಪನು ಭೀಷ್ಮನಿಗೆ ಬರೆದ "ವೀರ ಸಿದ್ಧಾಂತದ ಶಾಸನಂ ಬರೆದ ಪೊತ್ತಗೆಯೆಂತಮರಾಪಗಾತ್ಮಜಂ" ಎಂಬ ಮಾತನ್ನು ನೆನಪಿಸುತ್ತದೆ. ಸೇನಾಶಿಬಿರಗಳಲ್ಲಿ ನಡೆಯುತ್ತಿದ್ದ ಇಂತಹ ವೀರಸಿದ್ಧಾಂತದ ವ್ಯಾಖ್ಯಾನ ಗಳು ಸೈನಿಕರಲ್ಲಿ ರಣೋತ್ಸಾಹವನ್ನು ತುಂಬುತ್ತಿತ್ತು.

ಯುದ್ಧದ ಉತ್ಸಾಹವನ್ನು ಜನರಲ್ಲಿ ತುಂಬುತ್ತಿದ್ದ ಮೂಲ ಪ್ರಚೋದನೆಯೆಂದರೆ ಯುದ್ಧದಲ್ಲಿ ಗೆದ್ದರೆ ಇಹದಲ್ಲಿ, ಸತ್ತರೆ ಪರದಲ್ಲಿ ಸುಖಿಸಬಹುದು ಎಂಬ ಕಲ್ಪನೆ. ದುರ್ಗಸಿಂಹನ ಪಂಚತಂತ್ರ (ಪು. 206) ಹಾಗೂ ಅನೇಕ ಶಾಸನಗಳಲ್ಲಿ ಕಾಣಿಸಿಕೊಳ್ಳುವ :

> "ಜಿತೇನ ಲಭ್ಯತೇ ಲಕ್ಷ್ಮೀ: ಮೃತೇನಾಪ ಸುರಾಂಗನಾ
> ಕ್ಷಣವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇ ರಣೇ"

ಈ ಶ್ಲೋಕವು ಅಂದಿನ ಜೀವನ ಮೌಲ್ಯದ ಮೇಲೆ ದಟ್ಟಪ್ರಭಾವ ಬೀರಿತ್ತೆನ್ನುವಲ್ಲಿ ಸಂಶಯವಿಲ್ಲ. ಇದಕ್ಕೆ ಸಂವಾದಿಯಾದ ಪದ್ಯವೊಂದು ಪಂಪನಲ್ಲಿದೆ. ವೀರರು ಅರಸರ ಮುಂದೆ ಪ್ರತಿಜ್ಞೆಯನ್ನು ಮಾಡುವ ಸಂದರ್ಭದಲ್ಲಿ ಯೋಧನೊಬ್ಬ ನುಡಿಯುವ ಮಾತಿದು :

> ಸುರಲೋಕಂದೊರೆಕೊಳ್ವುದೊಂದು ಪರಮಶ್ರೀಲಕ್ಷ್ಮಿಯುಂ ಬರ್ಪುದಾ
> ದರದಿಂ ದೇವನಿಕಾಯದೊಳ್ ನೆರೆವುದೊಂದುತ್ಸಾಹಮುಂ ತನ್ನ ಮೆ
> ಯ್ಸಿರಿ ಭಾಗ್ಯಂ ನೆರಮಪ್ಪುದೊಂದೆ ರಣದೊಳ್ ಗೆಲ್ದಾಜಿಯಂ ತಳ್ತು ಸಂ
> ಗರದೊಳ್ ಜೋಳದ ಪಾಟಿಯಿಂ ನೆರಪಿದಂ ಗಂಡಂ ಪೆಱಂ ಗಂಡನೇ
>
> (ಪಂಪ ಭಾ 10–43)

"ದೇವಲೋಕ ಪ್ರಾಪ್ತಿಯಾಗುವುದು ಒಂದು ಫಲ, ಹಾಗೆಯೇ ಉತ್ತಮ ಐಶ್ವರ್ಯವೂ ಪ್ರಾಪ್ತವಾಗುವುದು ಮತ್ತೊಂದು ಫಲ. ನನ್ನ ಉತ್ಸಾಹವೂ ಮೈಸಿರಿಯೂ ಹೆಚ್ಚುವುದು. ಇಂತಹ ಒಂದು ಯುದ್ಧದಲ್ಲಿ ಭಾಗವಹಿಸಿ ವಿಜಯಶಾಲಿಯಾಗಿ ಅನ್ನದ ಋಣವನ್ನು ತೀರಿಸಿದವನೇ ನಿಜವಾಗಿ ಶೂರ. ಬೇರೆಯವನು ಶೂರನೇ" ಎಂಬಲ್ಲಿ ಯುದ್ಧೋನ್ಮುಖಿಗಳಾದ ಯೋಧರ ಮನಸ್ಸು ಆಲೋಚಿಸುತ್ತಿದ್ದ ರೀತಿಯ ಸ್ಪಷ್ಟ ಚಿತ್ರವಿದೆ. ಈ ಹಿನ್ನೆಲೆಯಲ್ಲಿ ಪಂಪನ ವೀರಯೋಧರು ಮತ್ತು ಅವರ ಪತ್ನಿಯರ ನಡುವಿನ ಸುಂದರವಾದ ಚಿತ್ರವೊಂದು ಮೂಡಿಬರುತ್ತದೆ. : ಯೋಧನೊಬ್ಬ "ಈ ಪೊಟ್ತೆಪ್ಪೊಬ್ಬುನಾಳೆ ದೇವಲೋಕದ ಕನ್ಯಕೆಯರೋಲಗದೊಳಿರ್ಪೆನೆಂದು ನುಡಿಯೆ" ಅವನ ವೀರರಮಣಿ ಇದಕ್ಕುತ್ತರವಾಗಿ 'ಎನ್ನೋಲೆ ಭಾಗ್ಯಮುಂಟೆಂದು' ಹೇಳಿ ಆತನು ಯುದ್ಧರಂಗದಿಂದ ಮರಳಿ ಬರುವನೆಂದು ಖಚಿತಪಡಿಸುವಳು. ಇನ್ನೊಬ್ಬಳು ತನ್ನ ಪತಿ ದಿವಿಜಾಂಗನೆಯೊಡನೆ ವಿಹರಿಸುವುದಕ್ಕೆ ಆಸ್ಪದ ನೀಡುವುದಿಲ್ಲ. ಸ್ವತಃ ನಾನೇ ದೇವಲೋಕಕ್ಕೆ ಬರುವ ತನ್ನ ಪ್ರಾಣಪ್ರಿಯನನ್ನು ಸ್ವಾಗತಿಸುವೆನೆನ್ನುವಳು. ಇಲ್ಲೆಲ್ಲ ವೀರಸ್ವರ್ಗವನ್ನು ಪಡೆಯಬೇಕೆಂಬ ಯೋಧರ ಮನದಾಳದ ಮಹತ್ವಾಕಾಂಕ್ಷೆ ನಿಚ್ಚಳವಾಗಿ ಹರಳುಗೊಂಡಿದೆ. ಹೀಗೆ ಸುಭಟರ ಆಲಾಪವು ಮುಂಜಾನೆಯವರೆಗೂ ಒಮ್ಮೊಮ್ಮೆ ನಡೆಯುತ್ತಿತ್ತು. (ಪಂಪರಾ 13–11ವ)

ಮುಂಜಾನೆ ಯುದ್ಧಕ್ಕೆ ಹೊರಡುವ ಮೊದಲು ಎಲ್ಲರೂ ಸ್ನಾನ ಮಾಡುತ್ತಿದ್ದರು: ಶುಚಿರ್ಭೂತರಾಗಿ, ಶುಭ್ರವಾದ ವಸ್ತ್ರವುಟ್ಟು. ಸುಗಂಧಯುಕ್ತ ಪುಷ್ಪಮಾಲೆಯನ್ನು ಧರಿಸಿ, ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿಕೊಂಡು, ಅಗ್ನಿಗಳಲ್ಲಿ ಯಥಾವಿಧಿಯಾಗಿ ಹೋಮಮಾಡಿ, ಅಸ್ತ್ರಶಸ್ತ್ರಗಳನ್ನು ಹಿಡಿದು ತಮ್ಮ ತಮ್ಮ ಧ್ವಜದೊಡನೆ ರಣಭೂಮಿಗೆ

ಕೌರವನ ಸೈನ್ಯವು ಹೊರಟಿತು. ಅವರೆಲ್ಲರೂ ಉತ್ತಮೋತ್ತಮವಾದ ವ್ರತಾಚರಣೆಯನ್ನು ಮಾಡಿದ್ದರು. (ಮಭಾಉ ಅ-195) ಯುಧಿಷ್ಠಿರನು ಸೈನಿಕರನ್ನು ಯಥಾಯೋಗ್ಯವಾಗಿ ಪುರಸ್ಕರಿಸಿ ರಣರಂಗಕ್ಕೆ ಪ್ರಯಾಣಮಾಡುವಂತೆ ಆಜ್ಞೆಮಾಡಿದನೆಂದು ವ್ಯಾಸರಲ್ಲಿದೆ. (ಮಭಾ ಅ-196) ಪಂಪನಲ್ಲಿ ವಿಕ್ರಮಾರ್ಜುನ ಯುದ್ಧಕ್ಕೆ ಸಿದ್ಧತೆ ಮಾಡುವ ಚಿತ್ರ ಇದನ್ನೇ ಹೋಲುತ್ತದೆ. "ವಿಕ್ರಮಾರ್ಜುನನನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದಗಣ್ಯ ಪುಣ್ಯತೀರ್ಥೋದಕಂಗಳಂ ಮಿಂದು ಮಂಗಳವಸದನಂಗೊಂಡು ಸಾಮಾನ್ಯ ಯಜ್ಞಂಗೆಯ್ದು ಪಲವುಂ ತೆಱದ ಪಱಿಗಳಿಸೆಯೆ ನಾಂದೀಮುಖಮಂ ನಿರ್ವರ್ತಿಸಿ ಶುಭ ಲಕ್ಷಣ ಲಕ್ಷಿತನುಂ ಸನ್ನಾಹ ಕರ್ಮನಿರ್ಮಿತನುಂ ಹಸ್ತಾಯುಧ ಕಳಶನುಂ ಭದ್ರಮನಸುಮಪ್ಪ ವಿಜಯ ಗಜಮುಮನಕ್ಷಯ ರಥಾಶ್ವ ಕೇತನ ಶರಾಸನ ಶರಧಿ ವಿಚಿತ್ರ ತನುತ್ರ ವಿವಿಧಾಸ್ತ್ರ ಶಸ್ತ್ರಂಗಳುಮಂ ಗಂಧ ಧೂಪ ದೀಪಾದಿಗಳಿಂದರ್ಚಿಸಿ ಪ್ರೊಡೆವಟ್ಟಾಗಳ್" (ಪಂಪ ಭಾ 10-46ವ) ಎಂದಿದೆ. ಕುಮಾರವ್ಯಾಸನಲ್ಲಿ ಯುದ್ಧಕ್ಕೆ ಹೊರಟ ಸೈನಿಕರನ್ನುದ್ದೇಶಿಸಿ ಸೇನಾಪತಿಯಾದ ಕರ್ಣನು ಭಾಷಣವನ್ನು ಮಾಡುವನು: ನೊಂದವರು ನಿಲ್ಲಿ, ಸ್ವಾಮಿ ಕಾರ್ಯಕ್ಕೆ ಹಿಂದುಗಳೆವರು ಮರಳಿ, 'ಓಡಿ ನಾಚಿಸುವವರು ನಿಲಿ, ರಣ ಹೇಡರೀಗಳೆ ಮರಳಿ, ಕೂಡುಗಲಕರು ನಿಲ್ಲಿ, ಇಹಪರಗೇಡಿಗಳು ಹೆರಸಾರಿ. ಇದರಿಂದ ನಾನೇನೂ ಸಿಟ್ಟಾಗುವುದಿಲ್ಲ.

> ಸಂದ ಸುಭಟರು ಬನ್ನಿ ಸ್ವರ್ಗದ
> ಬಂದಿಕಾರರು ಬನ್ನಿ ಮನದಿಂ
> ಮುಂದು ಹೆಜ್ಜೆಯ ತನಕಿಗರು ಬಹುದೆನ್ನ ಸಂಗಾತ
> ನೊಂದಡುಬ್ಬುವರಿತ್ತ ಬನ್ನಿ ಪು
> ರಂದರನ ಸರಿಗದ್ದುಗೆಗೆ ಮನ
> ಸಂದವರು ಹೊಗಿ ರಣವನೆಂದನು ಕರ್ಣ ನಿಜಬಲಕೆ
>
> (ಕುವ್ಯಾಕ 8-29, 30, 31)

ಶರೀರವನ್ನು ಕೊಡಿ. ಮುಕ್ತಿಯನ್ನು ಪಡೆಯಿರಿ ಎಂದು ಕರ್ಣನು ಘೋಷಿಸುವನು. ಕರ್ಣನ ಈ ಮಾತಿನಲ್ಲಿ ವೀರರ ದೇಶಾಭಿಮಾನ, ಆತ್ಮಾಭಿಮಾನವನ್ನು ಕೆಣಕಿ ಹೊಮ್ಮಿಸುವ ಆಶಯವಿದೆ.

ಹೀಗೆ ಸಾಂಪ್ರದಾಯಿಕ ವ್ರತಾಚರಣೆಗಳನ್ನೆಲ್ಲ ಮುಗಿಸಿ ನಿದ್ರಿಸಿದ ಸೈನಿಕರನ್ನು ಬೆಳಗಿನ ಜಾವದಲ್ಲಿ ಏಳಿಸುತ್ತಿದ್ದರು. ಸೈನಿಕರು ಯುದ್ಧಕ್ಕೆ ಸಿದ್ಧರಾಗುವ ವೇಳೆಗೆ ಸೂರ್ಯೋದಯವಾಗುತ್ತಿತ್ತು. ಮೊದಲೇ ನಿಶ್ಚಯಿಸಿದಂತೆ ವಿಶಾಲವಾದ ಬಯಲಿನಲ್ಲಿ ಸೈನ್ಯವನ್ನು ಒಡ್ಡುತ್ತಿದ್ದರು. ಯುದ್ಧರಂಗದಲ್ಲಿ ವ್ಯವಸ್ಥಿತವಾಗಿ ನಿಂತ ಸೈನ್ಯವನ್ನು ಪಂಪ "ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೊಡ್ಡಿ ನಿಂದಾಗಳ್" ಎಂದಿದ್ದಾನೆ. (ಪಂಪ ಭಾ 10-51ವ)

ಒಟ್ಟಿನಲ್ಲಿ ಕನ್ನಡ ನಾಡಿನ ಸುಭಟರ ಜೀವನ ಮೌಲ್ಯಗಳು ಕನ್ನಡ ಕಾವ್ಯದಲ್ಲಿ ಹರಳುಗೊಂಡಿದೆ. ರನ್ನನ ಕೃತಿಯಲ್ಲಿ ಬರುವಂತೆ :

ಗೆಲಲಾರ್ಪೊಡಿಱಿದು ಗೆಲ್ವುದು
ಗೆಲಲಾಱದೊಡಣ್ಕೆ ಸಾವುದಾಳ್ಗಿನಿತೆ ಗುಣಂ
ಗೆಲಲುಂ ಸಾಯಲುಮಾಱದೆ
ತೊಲಗಿದೊಡೆ ನೆಗಱ್ತೆ ತೊಲಗದಿರ್ಕುಮೆ ಮೆಯ್ಯಂ. (ಗದಾಯು 2-21)

"ಗೆಲ್ಲಲು ಸಾಮರ್ಥ್ಯವಿದ್ದರೆ ಯುದ್ಧ ಮಾಡಿಗೆಲ್ಲುವುದು. ಗೆಲ್ಲುವುದಕ್ಕೆ ಅಸಾಧ್ಯವಾದರೆ ಯುದ್ಧ ಮಾಡುತ್ತಾ ಸಾಯುವುದು ವೀರಯೋಧನ ಧರ್ಮ. ಗೆಲ್ಲಲಾರದೆ, ಸಾಯಲೂ ಮನಸ್ಸಿಲ್ಲದೆ ಹಿಂಜರಿದರೆ ಅಂಥವನನ್ನು ಕೀರ್ತ್ಯಂಗನೆಯರು ಬಿಟ್ಟು ಹೋಗದಿರುವರೇ" ಎಂಬಲ್ಲಿ ಸೈನಿಕರ ಕರ್ತವ್ಯ ಧರ್ಮ ಹಾಗೂ ಜೀವನಧರ್ಮ ಸ್ಪಷ್ಟವಾಗಿ ಮೂಡಿದೆ. ಪ್ರಾಚೀನ ಕನ್ನಡ ಕಾವ್ಯದಲ್ಲಿನ ಪಾತ್ರ, ಸನ್ನಿವೇಶಗಳು ಸಮಕಾಲೀನ ಬದುಕಿನ ಚೌಕಟ್ಟಿನೊಳಗಿಂದ ಹುಟ್ಟಿಬರುತ್ತವೆ. ಕನ್ನಡಿಗರು ಎಂದೂ ಅಭಿಮಾನಿಗಳು. ಹೇಡಿಗಳಲ್ಲ. ಸುಭಟರು. ಇಂತಹ ವೀರಯುಗದ ಅವರ ಜೀವನಾದರ್ಶಗಳನ್ನು ಪ್ರಾಚೀನ ಕಾವ್ಯಗಳು ನಿಚ್ಚಳವಾಗಿ ಕಣ್ಣೆದುರು ತೆರೆದು ನಿಲ್ಲಿಸುತ್ತವೆ. ಮಾತ್ರವಲ್ಲ, ವೀರಯುಗದ ಹಿನ್ನೆಲೆಯಲ್ಲಿ ಸೃಷ್ಟಿಯಾದ ಈ ಕೃತಿಗಳು ತಮ್ಮ ಕಾಲದ ಸಾಂಸ್ಕೃತಿಕ ಜೀವನದೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿವೆ. ಅದನ್ನು ಸಮರ್ಥವಾದ ರೀತಿಯಲ್ಲಿ ಅಭಿವ್ಯಕ್ತಿಪಡಿಸಿವೆ.

# ಪದ್ಮಿನಿ ಕಲ್ಯಾಣ — ಅಪ್ರಕಟಿತ ಕೃತಿ

-ಎಸ್. ಶಿವಣ್ಣ

## ಮೊದಲ ಮಾತು

'ಪದ್ಮಿನೀ ಕಲ್ಯಾಣದ ರಚಯಿತ್ರಿ ಶೃಂಗಾರಮ್ಮ. ಕೃತಿ ಸಾಂಗತ್ಯದಲ್ಲಿದೆ. ತಂದೆ ಚಿಂತಾಮಣಿ ದೇಶಿ ಕೇಂದ್ರ. ಗುರುಗಳು ಶ್ರೀನಿವಾಸದೇಶಿಕೇಂದ್ರರು. ಉಪಲಬ್ಧ ಪ್ರತಿಯಂತೆ ಈಕೆ 'ದೇವಭೂಪಾಲ ಸಂತವಿಸಿದ ಮಗಳು'. ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ಯರು 'ಕರ್ಣಾಟಕ ಕವಿಚರಿತೆ,' (ದ್ವಿತೀಯಸಂಪುಟ,) ಪು. 516-17ರಲ್ಲಿ ಶೃಂಗಾರಮ್ಮ 'ಕಂತುಗಿನ್ಮಡಿರೂಪ ಚಿಕದೇವಭೂಪಾಲ ಸಂತವಿಸಿದ ಸಣ್ಣಮಗಳು' ಎಂದಿರುವುದನ್ನು ಉಲ್ಲೇಖಿಸಿ ಈಕೆ ಚಿಕದೇವರಾಯನ (1672-1704) ಪೋಷ್ಯವರ್ಗಕ್ಕೆ ಸೇರಿದವಳೆಂದೂ, ಹೀಗಾಗಿ ಈಕೆಯಕಾಲ ಸು. 1685 ಎಂದೂ ನಿರ್ಧರಿಸಿದ್ದಾರೆ

ಕವಿಚರಿತೆಕಾರರಿಗೆ ಸಿಕ್ಕಿದ 'ಪದ್ಮಿನೀ ಕಲ್ಯಾಣ' ಕೃತಿಯಲ್ಲಿ 189 ಪದ್ಯಗಳಿದ್ದವು. ಪ್ರಸ್ತುತ ಉಪಲಬ್ಧ ಪ್ರತಿಯಲ್ಲಿನ ಕಡೆಯ ಪದ್ಯದಲ್ಲಿ ಈ ಕೃತಿಯಲ್ಲಿ 186 ಪದ್ಯಗಳಿದ್ದಂತೆ ತಿಳಿಸಿದೆ. ಆದರೆ ಪ್ರಕೃತ ಕೃತಿಯಲ್ಲಿ 177 ಪದ್ಯಗಳು ಲಭಿಸಿವೆ. ಈ ವ್ಯತ್ಯಾಸಗಳಿಗೆ ಕಾರಣಗಳು ತಿಳಿದಿಲ್ಲ.

'ಪದ್ಮಿನೀ ಕಲ್ಯಾಣ'ದ ಕಥಾವಸ್ತು ವೆಂಕಟೇಶ್ವರ-ಪದ್ಮಿನಿಯರ ವಿವಾಹವರ್ಣನೆ. ಈ ಕೃತಿಯ ಮೂಲ ಸಂಸ್ಕೃತದಲ್ಲಿನ 'ಸ್ಕಾಂದಪುರಾಣ' ಹಾಗೂ 'ವರಾಹ ಪುರಾಣ' ಗಳಲ್ಲಿರುವುದಾಗಿ ತಿಳಿದು ಬಂದಿದೆ.

ಶೃಂಗಾರಮ್ಮನ ಅನಂತರ 'ಪದ್ಮಿನೀ ಪರಿಣಯ'ವನ್ನು ರಚಿಸಿದ ಕಳಲೆ ವೀರರಾಜ (ಸು. 1720)ನ ಆಶ್ರಿತ ಚೆನ್ನಯ್ಯ ತನ್ನ ಕೃತಿಯನ್ನು 'ವರಾಹ ಪುರಾಣ'ವನ್ನು ಆಶ್ರಯಿಸಿ ರಚಿಸಿರುವುದಾಗಿ ತಿಳಿಸಿದ್ದಾನೆ. [(ಸಂ) ಪಿ. ವಿ. ನಾರಾಯಣ, ಕ. ಸಾ. ಪ, ಬೆಂಗಳೂರು. 1981.]

ಪ್ರಸ್ತುತ ಕೃತಿಯನ್ನು 'ಕನ್ನಡ ಅಧ್ಯಯನ ಕೇಂದ್ರ' (ಬೆಂಗಳೂರು ವಿಶ್ವವಿದ್ಯಾಲಯದ ಬ. ಪ್ರತಿ ಕ್ರಮಾಂಕ ಕೆ. 1603/2/ಗರಿ-೧-೨೦)ನ್ನು ಆಧರಿಸಿ ಪ್ರಕಟಣೆಗೆ ಸಿದ್ಧಪಡಿಸಲಾಗಿದೆ. ಪ್ರತಿಯನ್ನು ಬಳಸಿಕೊಳ್ಳಲು ಅನುಮತಿಸಿದ ಕೇಂದ್ರದ ನಿರ್ದೇಶಕರಿಗೆ ವಂದನೆಗಳು

# ಪದ್ಮಿನೀ ಕಲ್ಯಾಣ

ಗುರುಕುಲೋತ್ತಮ ಶ್ರೀನಿವಾಸದೇಶಿಕರಂಘ್ರಿ
ಗೆರಗುವೆ ಭಾವಭಕ್ತಿಯಲಿ
ಪರಮ ಮೂರುತಿಯಾದ ಪನ್ನಗಗಿರಿರಾಯ
ಕರುಣಿಸು ಮತಿಯ ನೀನೆನಗೆ ೧

ಲೋಕವೀರೇಳ ತನ್ನುದರದೊಳಂಬಿಟ್ಟ
ಶ್ರೀಕಾಂತ ಕಡು ಕರುಣದಲಿ
ಆಕಾಶರಾಯನ ಮಗಳು ಪದ್ಮಿನಿಗೊಲಿ-
ದಾಕಥೆಯನು ಬಣ್ಣಿಸುವೆನು ೨

ಧರೆಯೊಳಧಿಕವಾದ ನಗರಿ ನಾರಾಯಣ
ಪುರವೆಂಬ ಪಟ್ಟಣದೊಳಗೆ
ಪರಮ ಧಾರ್ಮಿಕ ತಾನಾದ ಆಕಾಶರಾಯ ತ-
ನ್ನರಸಿಸಹಿತಲೊಪ್ಪಿದನು ೩

ಪೃಥಿವಿಯನಾಳ್ವ ಆಕಾಶರಾಯನು ತನ್ನರ-
ಸಿ ಧರಣಿದೇವಿಯೊಡನೆ
ಸುತರಿಲ್ಲದವರಿಗೆ ಗತಿಯಿಲ್ಲವೆಂದು ತಾ
ನತಿ ಚಿಂತಿಸುಯ್ಯುತಿರ್ದ ೪

ಕರಸಿ ವಿಪ್ರರ ಪಾದಪದುಮಕೆರಗಿ ತನ್ನ
ಕರಕಮಲಂಗಳ ಮುಗಿದು
ಧರೆಯನಾಳುವರೊಂದು ಪುತ್ರಸಂತಾನವ
ಕರುಣಿಪುದೆಂದನಾ ನೃಪತಿ ೫

ಪುತ್ರಬೇಕೆಂಬ ರಾಯನ ಕೂಡೆ ವಿಪ್ರರು
ಚಿತ್ತಸಂತೋಷಗೊಳುತಲಿ
ಪುತ್ರಕಾಮೇಷ್ಟಿಯ ಮಾಡಲು ನೃಪತಿ
ಸತ್ಪುತ್ರರಾಗುವರೆಂದರವರು ೬

ಕೇಳಿವಿಪ್ರರಮಾತ ಭೂಪ ಸಂತೋಷವ
ತಾಳಿ ಪ್ರಧಾನರ ಕರಸಿ
ಆಳೋಚಿಸಿ ಕಾಮೇಷ್ಟಿಗೆ ತಕ್ಕ ದ್ರ
ವ್ಯಾಳಿಯ ನೆರಹಿದರಾಗ ೭

ಹಲವ ಪಿಡಿದುವೊತ್ತಿ ಹರುಷದಿಂದಲಿ ಭೂಪ
ನೆಲವ ಸೋದಿಸುತ ಬಪ್ಪಾಗ
ಥಳಥಳಿಸುವ ಹೆಣ್ಣು ಶಿಶುವು ಭೂಪತಿಗೆ ಕಂ
ಗೊಳಿಸಿತು ಅತಿ ಪುಣ್ಯದಿಂದ ೮

ಕಂಡು ವಿಸ್ಮಿತನಾಗಿ ಭೂಪ ಸಂತೋಷವ
ಗೊಂಡು ತಕ್ಕೈಸಿ ಮುಂಡಾಡಿ
ಪುಂಡರಿಕಾಕ್ಷಗೆ ಸಲುವಳಿಂತೆಂದು ಭೂ
ಮಂಡಲಪತಿ ತೆರಳಿದನು ೯

ಅರಮನೆಗೈದಿ ಆಕಾಶರಾಯನು ತ
ನ್ನರಸಿ ಧಾರುಣಿದೇವಿಯೊಡನೆ
ಹರಿ ಕರುಣಿಸಿದಯಿೊಶಿಶುವ ನೀ ಕೊಳ್ಳೆಂದು
ಪರಮ ಸಂತೋಷದಲಿತ್ತ ೧೦

ಪದ್ಮವ ಪೋಲುವ ಕರ ಚರಣಂಗಳು
ಪದ್ಮದೆಸಳ ಪೋಲ್ವ ನಯನ
ಪದ್ಮದಂದದ ಮುಖವುಳ್ಳ ಕಾರಣದಿಂದ
ಪದ್ಮಿನಿಯೆಂದು ಕರದರು ೧೧

ಈ ರೀತಿಯಲಿ ದಿನದಿನಕೆ ಪದ್ಮಿನಿದೇವಿ
ತಾರಾಧಿಪತಿಯಂದದಲಿ
ವಾರಿಜಗಂಧಿ ತಾ ಬೆಳವುತಿರ್ದಳು ಸಿರಿ
ನಾರಾಯಣನ ಧ್ಯಾನದಲಿ ೧೨

ಅಂಬೆಗಾಲಿಡುವಳು ಆನೆಯ ಮಾನಕೆ
ತುಂಬಿ ತಾರೆಂದು ಕಾಡುವಳು
ಕಂಭವ ಪಿಡಿದು ಮೆಲ್ಲನೆ ನಡೆವಳು ಹೊನ್ನ
ಬೊಂಬೆಯ ಪಿಡಿದಾಡುವಳು ೧೩

ಪುಟ್ಟ ಕೈಗಳಲಿ ಚಪ್ಪಳೆಯಿಕ್ಕುವಳು ತಪ್ಪು
ದಟ್ಟಡಿಯಿಟ್ಟು ನಡೆವಳು
ಬಟ್ಟಮೊಗದ ಬಾಲಿಯ ಮುದ್ದುನುಡಿಗೇಳಿ
ಸೃಷ್ಟಿಯ ಜನರು ಮೋಹಿಸಿತು ೧೪

ಒಂದು ದಿವಸ ದೇವ ಮುನಿಯು ನಾರದ
ಬಂದು ಪದ್ಮಿನಿಯಾಡುವೆಡೆಗೆ
ಸಂದೇಹವಿಲ್ಲ ಶ್ರೀಹರಿಗೆ ಸೀಸತಿಯಹೆ-
ಯೆಂದು ಬೇಗದಿ ತೆರಳಿದನು ೧೫

ಶಶಿಮುಖಿ ಪದುಮಿನಿದೇವಿಗೆ ಯಿೂಪರಿ
ದಶವರುಷಗಳು ತುಂಬಿದವು
ನಸುನಗೆವೆರಸಿ ಸಂಗಾತಿಯರೊಡಗೂಡಿ
ಕುಸುಮವನವನೈದಿದಳು ೧೬

ತೆಂಗು ಖರ್ಜೂರ ಹಿಂತಾಳೆ ದ್ರಾಕ್ಷೆಯು ಸಾ
ರಂಗ ಪಲಸು ದಾಳಿಂಬ
ಮಂಗಳವಾದ ಮಾವುಗಳಿಂದಲೆಸದಿಹ
ಶೃಂಗಾರವನವನೈದಿದಳು ೧೭

ಮರುಗ ಮಲ್ಲಿಗೆ ಮೊಲ್ಲೆ ಸೇವಂತಿಗೆಯು ಪಾ
ದರಿ ಕಂಚಿವಾಳ ಕ್ರಮುಕವು
ಸುರಗಿ ಸಂಪಿಗೆ ಜಾಜಿ ಮೊದಲಾದ ಪರಿಮಳ-
ದರಳ ಕೊಯ್ವರು ನಸುನಗುತ ೧೮

ನುಡಿವಳು ಗಿಳಿಯಂತೆ ಸಖಿಯರೊಂದಾಗಿ ಮೆ
ಲ್ಲಡಿಯಿಡುವಳು ಹಂಸೆಯಂತೆ
ಬೆಡಗಿಂದ ನವಿಲಂತೆ ನಲಿಯುತಿರ್ದಳು ಮುದ್ದು
ಕಡುಚಪಳೆಯರೊಂದುಗೂಡಿ ೧೯

ಅತ್ತಲಾ ವೆಂಕಟಗಿರಿಯಲ್ಲಿ ಶ್ರೀಪುರು
ಷೋತ್ತಮ ತನ್ನೆಡಬಲದ
ಮೊತ್ತದ ಪರಿವಾರದೊಡನೆ ಬೇಂಟೆಯನಾಡ
ಚಿತ್ತೈಸ ಬೇಕೆಂದು ನುಡಿದ ೨೦

ಅಗಿಲು ಕುಂಕುಮ ಗಂಧದನುಲೇಪನವ ಮಾಡಿ
ಮೃಗಮದ ತಿಲಕವ ತಿದ್ದಿ
ಮುಘಮುಘಿಸುವ ಮೊಲ್ಲೆ ಮಲ್ಲಿಗೆ ಮೊಗ್ಗೆಯ ಶಿ
ಗ[ಖೆ]ಂಗೆ ಸುತ್ತಿ ಧರಿಸಿದ ೨೧

ಹಾರ ಪದಕ ಕರ್ನಕುಂಡಲವೆಸವ ಕೇ
ಯೂರ ಕಂಕಣ ಕಡಗಗಳು
ತೋರಮುತ್ತಿನ ಕಂಠಮಾಲಿ ಮುದ್ರಿಕೆಯಿಟ್ಟ
ನಾರಾಯಣನೊಪ್ಪಿದನು ೨೨

ಕಟ್ಟಿದ ಕಾಂಚಿದಾಮವ ಸೆಳೆನಡುವಿಗೆ
ಉಟ್ಟನು ಪೀತಾಂಬರವ
ದಿಟ್ಟ ತುರಗವೇರಿ ರಾಯರಾವುತನಾಗಿ
ಸೃಷ್ಟೀಶ ಸ್ವಾರಿಗೈದಿದನು ೨೩

ಅಡವಿಯೊಳಿಹ ಕ್ರೂರ ಮೃಗಜಾತಿಗಳನೆಲ್ಲ
ಕಡಿದು ಕಾಲನಿಗೆವೊಪ್ಪಿಸಿದ
ವೊಡನಿದ್ದ ಪರಿವಾರವೆಲ್ಲ ಬಳಲಿ ಬಂದು
ಗಿಡಮರಗಳನು ಸೇರಿದರು ೨೪

ಜಲರುಹನಾಭ ಈ ಪರಿಯ ಬೇಂಟೆಯ ನಾಡಿ
ಬಳಲಿ ಬರು [ವ] ಮಾರ್ಗದಲ್ಲಿ
ಇಳೆಯೊಳಗ್ಗಳವಾದ ಮದಗಜ ಕಾಣಿಸಿ
ತೊಲಗಿತು ಅತಿ ಬೇಗದಿಂದ ೨೫

ಮದಕರಿಯನು ಕೊಂದು ಕಳೆವೆನೆಂದೆನುತಾಗ
ಮದನಜನಕ ಬರುತಿರಲು
ಬೆದರಿ ಪೊಕ್ಕುದು ಆನೆ ಆಕಾಶರಾಯನ
ಪದುಮಿನಿಯಾಡುವ ವನವ ೨೬

ಆಡುವ ಮಕ್ಕಳು ಕರಿಯ ಕಾಣುತಲಂಜಿ
ವೋಡಿ ಹೋದರು ದಿಕ್ಕುದೆಸೆಗೆ
ನೋಡಿ ಹವ್ಹೈಸಿ ಪದ್ಮಿನಿಯೊಂದು ವೃಕ್ಷನ
ಗಾಢಾಲಿಂಗನವ ಮಾಡಿದಳು ೨೭

ಕರಿಯು ಬೆನ್ನಟ್ಟಿ ಬನವ ಹೊಕ್ಕ ನರಹರಿ
ಅರಸಿಕಾಣದೆ ಬರುತಿರಲು
ಮರಿದುಂಬಿಗುರುಳ ಪದ್ಮಿನಿಯ ಗಕ್ಕನೆ ಕಂಡು
ಮರುಳುಗೊಂಡಂದದಿ ನಿಂದ ೨೮

ದೂರದಿಂದಲೆ ಕಂಡ ಮಾತ್ರ ಮಾನಿನಿಗಿಂದು
ಮಾರು ಹೋಯಿತು ಎನ್ನ ಮನಸು
ಮಾರನೆಚ್ಚಂಬಿನಟ್ಟುಳಿಯ ತೆಗೆವಳೆಂದು
ಸೇರಿ ನಿಂದನು ಪದ್ಮಿನಿಯ ೨೯

ಹರಿಣಲೋಚನೆ ನೀನಾರು ನಿನ್ನನು ಪೆತ್ತ
ದೊರೆಯಾರು ಈ ವನದೊಳಗೆ
ಇರುವ ಕಾರಣವೇನು ಸೊಲ್ಲಿಸೆನ್ನೊಡನೆಂದು
ಕರಿರಾಜವರದ ಕೇಳಿದನು ೩೦

ಮಾತಿನ ಬಗೆಯ ತಿಳಿದು ಪದುಮಿನಿಗಾಗ
ಪ್ರೀತಿಯಿಮ್ಮಡಿ ಜನಿಸಿದವು
ಸೋತ ಚಿತ್ತವ ನೆಲೆಗೊಳಿಸಿ ರಾವುತನೊಳು
ನೀತಿಯ ಮಾತನಾಡಿದಳು ೩೧

ತಂದೆಯ ಪೆಸರು ಆಕಾಶ ಭೂಪಾಲನು
ಯಿಂದೆನ್ನ ಪೆಸರು ಪದ್ಮಿನಿಯು
ಮುಂದಗಮನೆ ಧಾರುಣಿದೇವಿ ಪಡದಳು
ಯೆಂದು ಪೇಳಿದಳವನೊಡನೆ ೩೨

ಆರಮಗನು ನಿನ್ನ ಪೆಸರೇ ನಿಲ್ಲಿಗೆ ಬಂದ
ಕಾರಣವೇನು ಒಂಟಿಯಲಿ
ನಾರಿಯರೊಡನೆ ಮಾತಾಡುವುದುಚಿತವೆ
ಸಾರುನೀನೆಂದಳಾ ರಮಣಿ ೩೩

ರಮಣಿ ಕೇಳನಗೀಗ ತಂದೆ ತಾಯಿಗಳಿಲ್ಲ
ಯಿರುವ ರೊಂದೆಡೆ ನೇಮವಿಲ್ಲ
ಕರದು ಲಾಲಿಸಿದರ ಮನೆಯ ಕಾದಿರುವೆನು
ತಿರುಗುವೆ ಸಕಲ ಲೋಕಗಳ ೩೪

ಹುಟ್ಟು ನೀರೊಳಗಾಡಿ ಹೊಳವನೆಂದೆಂಬರು
ಘಟ್ಟಬೆನ್ನಾತನೆನ್ನುವರು
ಹೊಟ್ಟೆಗಿಲ್ಲದೆ ಗೆಡ್ಡೆಗೆಣಸ ತಿಂಬನು ಬಾಯ
ಬಿಟ್ಟಂಜಿಸುವನೆಂದಾಡುವರು ೩೫

ತಿರುಕಹಾರುವನೆಂದು ನುಡಿವರು ಕೆಲವರು
ಕೊರಳಗೊಯಿಕನೆಂದಾಡುವರು
ಅರಸಿಯ ಕಾಣದಳಲಿ ವ್ಯೈಯ್ಯನೆಂಬರು
ಪರನಾರಿಜಾರನೆನ್ನುವರು ೩೬

ಉಡುವದೊಂದರುವೆಯಿಲ್ಲದವನೆಂದೆಂಬರು
ಬಡತನಕಾಗಿ ಕುದುರೆಯ
ಪಿಡಿದು ತಿದ್ದುವನೆಂದು ಪಲಬಗೆಯಲಿ ಎನ್ನ
ನುಡಿವರು ರಮಣಿ ಕೇಳೆಂದ ೩೭

ಧರಣಿಗಧಿಕವಾದ ವೇಂಕಟಾದ್ರಿಯಲ್ಲಿ
ಸ್ಥಿರವಾಸವಾಗಿ ನಾನಿಹೆನು
ಶರಭ ಶಾರ್ದೂಲ ಕಾಡಾನೆಯ ಬೇಂಟೆಗೆ
ಹರಿದು ಬಂದೆನು ನಾನೆಂದ ೩೮

ಹೇರಡವಿಯ ಸುತ್ತಿ ತೊಳಲಿ ಬಳಲಿ ಬಾ
ಯಾರಿ ಬಂದೆನು ನಿನ್ನ ಬಳಿಗೆ
ಸೇರೆಗಣ್ಣವಳೆ ನಿನ್ನಧರಾಮೃತವಿತ್ತು
ಆರೈದು ಸಲಹ ಬೇಕೆಂದ ೩೯

ದಿಟ್ಟಕಾಮನ ಅಲರಂಬೆನ್ನ ಹೃದಯವ
ನೆಟ್ಟು ಹೇರಳ ವೇದನೆಯ
ಕಟ್ಟಾಣಿಮಣಿ ನಿನ್ನ ಕಠಿಣಕುಚಗಳಿಂದ
ಮುಟ್ಟಿ ಮಂತ್ರಿಸು ಬೇಗಲೆಂದ ೪೦

ಎಲೆ ಪ್ರಿಯೆ ನಿನ್ನ ನಾಲ್ಕುಡಿನೋಟ ಸೊಗಸಾದ
ಬಲೆಯೊಳು ಹರಿಯೆಂಬ ಮೃಗವು
ಸಿಲುಕಿತು ನಿನ್ನಯ ನಳಿತೋಳುಗಳಿಂದ
ಬಲಿದು ಬಂಧಿಸುವೆ ಬೇಗಲೆಂದ ೪೧

ಇಂತು ವಿರಹದಲಿ ಮಾತನಾಡುವ ಸಿರಿ
ಕಾಂತನ ಮೊಗ ನೋಡಿ ನಗುತ
ಅಂತರಂಗದ ಮೋಹವ ಬಗಿವಿಡಿದೆಲೊ
ಭ್ರಾಂತ ಹೀಗೆಂದು ಹೇಳಿದಳು ೪೨

ಚೋರಗಂಡಿಯಲಿ ನೀನಿಲ್ಲಿಗೈದಿದೆಯೆಂಬ
ದೂರ ಕೇಳಿದರೆ ನಮ್ಮೈಯ್ಯ
ಜಾರನೆಂದರಿದು ನಿನ್ನಯ ಕಿವಿಮೂಗನು
ಮೂರವಾಡುವನೆಂದಳಬಲೆ ೪೩

ಅಂದಿಗೆಕಾಲ ಅಂಗನೆ ಕೇಳು ನಾನಿಲ್ಲಿ
ಬಂದುದ ಕೇಳಿ ನಿಮ್ಮೈಯ್ಯ
ಸಂದೇಹ ಪೇಳಿಸಿತಿಲ್ಲ ನಿನ್ನೊಡನೆನ್ನ
ಒಂದು ಮಾಡುವನೆಂದ ನಗುತ ೪೪

ನಮ್ಮೈಯ್ಯನಾಳ್ವ ಪಟ್ಟಣವಿದು ಈ ವನ
ನಮ್ಮದು ಪುರುಷರೆಂಬವರು
ಗಮ್ಮನೆಯಿಲ್ಲಿಗೆ ಬರಲಂಜುವರು ಚೋರ
ಸುಮ್ಮನೆ ಹೋಗೆಂದಳವಳು ೪೫

ನೀಕರಿಸಿದ ನುಡಿಗೇಳಿ ರಾವುತರಾಯ
ವ್ಯಾಕುಲ ಮಾನಸನಾಗಿ
ಮೂಕನಂದದಿ ಪರಿವಾರ ಸಹಿತ ಸರ್ವ
ಲೋಕನಾಯಕ ತೆರಳಿದನು ೪೬

ಬಳಸಿಪ್ಪ ಪರಿವಾರಕುಡುಗೊರೆಗಳನಿತ್ತು
ಕಳುಹಿಸಿ ತನ್ನರಮನೆಯ
ಪ್ರೋಕ್ಷಪ್ರೋಕ್ಷ ಶಿರಿಮಂಚದಮೇಲೆ ಪವಡಿಸಿ
ಬಳಲಿ ನಿಟ್ಟುಸುರಿ[ಂ]ದ ೭೪

ಸಿರಿಮೊದಲಾದ ನಾರಿಯರ ಮುಖವ ನೋಡ
ಪರಿಜನರೊಡನೆ ಮಾತಾಡ
ತೊರೆದು ಭೋಜನ ಮಜ್ಜನಾದಿಗಳನು ಬಿಟ್ಟು
ಕರಗಿ ನಿಟ್ಟುಸುರಿಡುತಿರ್ದ ೪೮

ಅಂತರಂಗದ ನಾರಿ ವಕುಳ ಮಾಲಿಕೆ ಸಿರಿ
ಕಾಂತನಂಘ್ರಿಯ ಮೆಲ್ಲನೊತ್ತಿ
ಚಿಂತೆಯೇನಲೆದೇವ ಸೊಲ್ಲಿಸೆನುತ ನೀಲ
ಕುಂತಳೆ ಬಿನ್ನವಿಸಿದಳು ೪೯

ಕಂದಿತು ಮುಖಪದ್ಮ ಮುಡಿದ ಮಲ್ಲಿಗೆ ಬಾಡಿ
ಬೆಂದಿತು ನಿಟ್ಟುಸುರಿಡಲು
ಕುಂದಿತು ಬಲ ಆವತರುಣಿಯ ಕಣ್ಣಿಟ್ಟು
ಬಂದೆ ನೀನೆಂದು ಪೇಳಿದಳು ೫೦

ವನಿತೆ ಕೇಳೊಂದದುಭುತದ ಬೇಂಟೆಯನಾಡಿ
ವನದೊಳು ಬಳಲಿ ಬಪ್ಪಾಗ
ಕನಕಲತಾಂಗಿಯೋರ್ವಳ ಕಂಡು ಕಣ್ಣಿಟ್ಟು
ಮನಸೋತು ಮರುಳಾದೆನೆಂದ ೫೧

ತುಂಬೆಗುರುಳ ಫಣವೇಣಿ ಕುಂಕುಮಗಂಧಿ
ಅಂಬುಜನಯನೆ ಏಣಾಂಕ
ಬಿಂಬವದನೆ ಪೆಣ್ಗಳರಸಿ ಕೋಕಿಲವಾಣಿ
ಕಂಬುಕಂಧರೆಯವಳವಳು ೫೨

ನಿಡಿದೋಳು ಚಳ್ಳುಗುರಿನ ಪಲ್ಲವಪಾಣಿ
ಎಡೆವಿಡದಿಹ ಕುಚದವಳು
ಬಡನಡುವಿನ ಮಂದಗಮನೆ ಕೂರುಮನಂದ
ದಡಿಯುಳ್ಳ ಬೆಡಗಿ ಕಾಣವಳು ೫೩

ಅದಲಾಲಿಸುವದು ಮಿನಿಗೆ ಪೂರ್ವ
ದಲಿ ವೇದಾವತಿಯೆಂಬ ಪೆಸರು
ವೇದಪುರುಷನಿಂದ ಜನಿಸಿ ಎನಗೆ ಸತಿ
ಯಾದಪೆನೆಂದಿರ್ದಳವಳು ೫೪

ಹರಿಯನಲ್ಲದೆ ವೊಲ್ಲೆನೆಂದು ತಪವಮಾಳ್ಪ
ತರುಣಿಯ ದಶಕಂಧರನು
ಕರವ ಪಿಡಿದು ತುಡುಕಲು ಕಣ್ದೆರದು ನೋಡಿ
ಬರದಿ ಮುನಿದು ಶಪಿಸಿದಳು ೫೫

ಎಲೆ ಕುನ್ನಿ ರಕ್ಕಸ ಆವಾಗ ಸತಿ ನೀ
ಬಲವಂತದಿಂದ ಪಿಡಿವರೆ
ತಲೆ ಛಿನ್ನ ಭಿನ್ನವಾಗಲಿ ನಿನ್ನ ಕುಲವ
ನಳಿವೆನೆಂದುರಿಯ ಕೂಡಿದಳು ೫೬

ಆ ವನಿತೆಯು ಅಗ್ನಿ ಪುರುಷನು ಸ್ವಾಹಾ
ದೇವಿಸಹಿತ ಸಲಹಿದನು
ದೇವಾದಿಗಳ ಮೊರೆಗೇಳಿ ನಾ ದಶರಥ
ಭೂವಲ್ಲಭಗೆ ಜನಿಸಿದೆನು ೫೭

ಮುನಿಯ ಮಖವ ಕಾಯ್ದು ಕಲ್ಲ ಹೆಣ್ಣನು ಮಾಡಿ
ಜನಕಾತ್ಮಜೆಯನು ಕೈಗೂಡಿ
ಘನ ಹರುಷದಲಿ ಅಯೋಧ್ಯಾ ಪಟ್ಟಣದೊಳು
ಅನುಜರೊಡನೆ ಇದ್ದೆನೆಂದ ೫೮

ಪಟ್ಟವಯೆನಗೆ ಕಟ್ಟುವೆನೆಂದು ದಶರಥ
ಸೃಷ್ಟೀಶ ಅನುಗೈವುತಿರಲು
ದುಷ್ಟಚಿತ್ತದ ಕೈಕೆ ಪತಿಯು ವರವ ಬೇಡಿ
ಅಟ್ಟಿದಳೆನ್ನ ಕಾನನಕೆ. ೫೯

ತಮ್ಮ ಲಕ್ಷ್ಮಣ ಸೀತೆ ಸಹಿತ ಕಾನನದೊಳು
ಸುಮ್ಮಾನದಿಂದಿರುತಿರಲು
ಹೊಮ್ಮೃಗವಾಗಿ ರಕ್ಕಸ ಸುಳಿಯಲು ಕಂಡು
ನಮ್ಮ ಜಾನಕಿ ಬಯಸಿದಳು ೬೦

ಬೇಗ ಭೂಸುತೆಗೆ ಮೃಗವ ತಹೆನೆಂದು ನಾ
ಹೋಗಿ ಬಾಣದಲಿಡಲದನು
ಕೂಗಿತು ಸೀತೆ ಲಕ್ಷ್ಮಣಯೆಂಬ ನುಡಿ
ಆಗ ಜಾನಕಿಗೆ ಕೇಳಿಸಿತು ೬೧

ಹಸ್ತ್ಯಪಿ ಸೀತೆ ರಘುವರ ನೋಡುವರೀಗ
ಉರ್ಮಿಳಾಪತಿ ಪೋಗೆನಲು
ಘಮ್ಮನೆ ಅಗ್ನಿಯ ಕಾಹಸಿರಿಸಿ ಎಮ್ಮ
ತಮ್ಮ ಲಕ್ಷ್ಮಣ ತೆರಳಿದನು ೬೨

ಆ ವೇಳೆಯಲ್ಲಿ ಜಾನಕಿಯ ಕದ್ದೊಯ್ವರೆ
ರಾವಣ ಬಂದು ನಿಂದಿರಲು
ಪಾವನ ವೇದಾವತಿಯ ತಂದಿರಿಸಿ ನಮ್ಮ
ದೇವಿ ಜಾನಕಿಯ ಬಚ್ಚಿಟ್ಟ ೬೩

ಶರದಿಂದುಮುಖಿ ಸೀತೆಯವಳೆಂದು ಕದ್ದೊಯ್ದು
ಶಿರಹತ್ತು ಉಳ್ಳ ರಾವಣನು
ಪುರಕೆ ಕೊಂಡೊಯ್ದು ಅಶೋಕವನದೊಳಾಗ
ಸೆರೆಯಿಟ್ಟು ಅತಿ ನೋಯಿಸಿದ ೬೪

ಅರಸಿ ಜಾನಕಿಯ ಕಾಣದೆ ಕಪಿ ಕಟಕವ
ಸೆರಹಿ ಕಡಲ ಸೇತುಗಟ್ಟಿ
ಶಿರವನರಿದು ರಾವಣನ ಅವನನುಜಗೆ
ಸ್ಥಿರಪಟ್ಟ ಗಟ್ಟಿದೆನೆಂದ ೬೫

ಪೃಥ್ವಿಸುತೆಯ ರೂಪ ಧರಿ[ಸಿ]ದ ವೇದಾ
ವತಿಯ ನಾ ಕರದು ಅಗ್ನಿಯಲಿ
ಅತಿವೇಗ ಸತ್ಯವ ಮಾಡಬೇಕೆಂದರೆ
ಚದುರೆ ಹೊಕ್ಕಳು ಉರಿಯೊಳಗೆ ೬೬

ಅಂದು ತನ್ನಯ ವಶದೊಳಗಿರ್ದ ಕುಂಭಿನೀ
ನಂದನೆಯನು ಅಗ್ನಿ ಪುರುಷ
ತಂದಿತ್ತ ರಮಣಿಯ ವೊಂದುಗೂಡಿ ಪರಮಾ
ನಂದದಿಂದಿರುತಿರ್ದೆನಾಗ ೬೭

ಎನಗಾಗಿ ಸೆರೆಯಿರ್ದಳೀವೇದಾವತಿ
ವನಿತೆಯರೊಳಗತಿ ಸೊಬಗಿ
ವನಜಾಕ್ಷನೊಲಿಸಬೇಕೆಂದೆನಗೆರಗಿ ಆ
ಜನಕನಂದನೆ ಬೆಸಸಿದಳು ೬೮

ಮೇದಿನಿಗಧಿಕ ವೆಂಕಟಗಿರಿಯನು ನಾನು
ಐದಿದೆ ಭಕ್ತರಿಗೊಲಿದು
ವೇದಾವತಿ ಆಕಾಶರಾಯಗೆ ಮಗ
ಳಾದರೆ ವೊಲಿಸುವೆನೆಂದೆ ೬೯

ಶತಪತ್ರಸುತನ ಪಟ್ಟಣದಲ್ಲಿ ವೇದಾವ
ತಿ ತಪವಿದ್ದಳಿನ್ನೆವರ
ಸತಿಯರೊಳುತ್ತಮೆ ಆಕಾಶರಾಯಗೆ
ಮಗಳಾಗಿ ಜನಿಸಿದಳೆಂದ ೭೦

ಬುದ್ಧಿಸಂಪನ್ನೆ ವಕುಳಮಾಲಿನಿ ಎನ್ನ
ಮುದ್ರಿಕೆಯನು ಕುರುಹಿತ್ತು
ಪದ್ಮಿನಿಯೊಡನೆ ಮಾತಾಡಿ ಬಾರೆಂದಾಗ
ಮುದ್ದಿಸಿ ತಲೆದಡಹಿದನು ೭೧

ನೀ ಹೋಗಿ ನಗರಿ ನಾರಾಯಣಪುರಕೆ ಆ
ಭೂಪಾಲನೊಡನೆ ಮಾತಾಡಿ
ಆ ಪದುಮಿನಿಯ ತಂದಿತ್ತರೆನಗೆ ಪರಿ
ತಾಪ ಹಿಂಗುವದು ಕೇಳೆಂದ ೭೨

ಜೀಯ ಬಿನ್ನಪವ ಲಾಲಿಸಿ ಬೇಗ ನಗರಿ ನಾ
ರಾಯಣಪುರಕೆ ನಾ ಹೋಗಿ
ಆ ಯುವತಿಯ ನಿನಗೊಲಿದುಗೂಡಿಪೆನೆಂದು
ವಾಯುವೇಗದಿ ತೆರಳಿದಳು ೭೩

ತರುಣಿಯರರಸಿ ವಕುಳಮಾಲೆ ತಾ ಹೋಗಿ
ಪುರದ ಬಾಗಿಲೊಳೆಸೆದಿರುವ
ಹರನಾಲಯದೊಳಗಿರುತ ಪದ್ಮಿನಿಯಿಪ್ಪ
ತೆರನ ಕೇಳುತಯಿರ್ದಳಾಗ ೭೪

ಅತ್ತ ಪದ್ಮಿನಿಯ ಆಡುವ ಸಖಿಯರು ಅರ
ಸುತ್ತ ಬಂದರು ವನದೊಳಗೆ
ಚಿತ್ರದ ಪ್ರತುಮೆ ಎಂಬಂವದಲಿರ್ದ ಬಾಲೆಯ
ಸುತ್ತ ನಿಂದರು ಬಿಸುಸುಯ್ದು ೭೫

ಫುಲ್ಲನಯನೆ ಮದಕರಿಗಂಜಿ ನೀನು ನ
ಮ್ಮೆಲ್ಲರನುಳಿದು ಒಂಟಿಯಲಿ
ಇಲ್ಲಿಗೈದುವರೆ ಪೇಳೆಂದವರ ಕೂಡೆ
ಸೊಲ್ಲನಾಡಳು ಮರುಳಾಗಿ ೭೬

ಧೊರೆಯ ಮೋಹದ ಮಗಳಿಗೆ ವನದೊಳು ದೊ
ಡ್ಡಗ್ರಹ ಹಿಡಿಯಿತುಯೆಂದು ನಡುಗಿ
ತರಳೆಯರೆಲ್ಲ ಕೈಗಳ ನೆಗ್ಗೊತ್ತುತ
ಧರಣಿದೇವಿಗೆ ಅರುಹಿದರು ೭೭

ಕೇಳಿ ಹಮ್ಮೈಸಿ ಧಾರಣಿದೇವಿ ಪೋಗಿ ತ
ನ್ನಾಳಿದನೊಡನೆ ಪೇಳಿದರೆ
ಏಳುತ್ತ ಎಡಹುತ್ತ ಆಕಾಶನೃಪ ತನ್ನ
ಬಾಲೆಯಿದ್ದೆಡೆಗಾಗಿ ಬಂದ ೭೮

ಬಂದು ದಂಪತಿಗಳು ಮಗಳ ಕಾಣುತ ಮುದ್ದು
ಕಂದ ಬಾರೆಂದು ತಕ್ಕೈಸಿ
ಅಂದಣದೊಳಗಿಟ್ಟು ಪಲವ ಪಂಬಲಿಸುತ್ತ
ತಂದನು ತನ್ನರಮನೆಗೆ ೭೯

ಹೊನ್ನ ಮಂಚದಮೇಲೆ ತಳಿರೆಲೆಗಳ ಹಾಸಿ
ಚೆನ್ನೆ ಪದ್ಮಿನಿಯನೊರಗಿಸಿ
ಪನ್ನೀರತಳಿದು ಬೀಸುವರಡಿಗಡಿಗೆ ಬಾ
ವನ್ನವ ತಂದು ಪೂಸುವರು ೮೦

ಪೂಸಿದ ಶ್ರೀಗಂಧ ಪುಡಿಯಾಗುವದು ಮಂಚ
ಕಾಸಿದ ತಳಿರೊಣಗುವದು
ಬೇಸಿಗೆಯಾದವು ಬೆಳುದಿಂಗಳು ವೆಂಕ
ಟೇಶನ ನೆನೆದು ಪದ್ಮಿನಿಗೆ ೮೧

ಹೊಕ್ಕುಳ ಹೂವಲಿ ಅಜನ ಪೆತ್ತವನೆನ್ನ
ಲೆಕ್ಕಿಸಿ ಮಾತನಾಡಿದರೆ
ಎಕ್ಕಸವಾಡಿದೆ ಅಯ್ಯೊ ವಿಧಿಯೆಯೆಂದು
ದುಃಖಿಸಿದಳು ಕಮಲಾಕ್ಷಿ ೮೨

ಮದನನ ಪೆತ್ತ ಸೊಬಗಿ ಪಟ್ಟದರಸಿ ಮೇ
ಲ್ಪದಿನಾರು ಸಾವಿರ ಸತಿಯ
ರೊಡಗಿ ಭೋಗಿಸುವ ದೇವೋತ್ತಮನಿಗೆ ನಾನು
ಯಿದಿರೆಯೆನುತ ಹಲುಬುವಳು ೮೩

ಬೇಡಳು ಬೇಕಾದ ವಸ್ತುವ ಕಣ್ಣಿಲಿ
ನೋಡಳು ಸಖಿಯರ ಮುಖವ
ಆಡಳು ಸವಿಮಾತು ಗೆಳೆಗಳೊಡನೆ ಇಂತು
ಬಾಡಿ ಬಳುಕುತಿರ್ದಳವಳು . ೮೪

ಮುದ್ದು ಮುಖದ ಪದುಮಿನಿಗಾರೊಮ್ಮೆ ಕದ
ಮದ್ದನಿಕ್ಕಿದರೊ ಅಲ್ಲದಡೆ
ಹೊದ್ದಿತೊ ಬೊಮ್ಮರಕ್ಕಸ ಮಂತ್ರಿಸೆಂದು
ಮದ್ದರ ಕರದು ಹೇಳಿದರು ೮೫

ಮಂತ್ರಿಸಿ ವಿಪ್ರರು ರಕ್ಷೆಯನಿಡುವರು
ಯಂತ್ರವ ಬರದು ಕಟ್ಟುವರು
ಚಿಂತಾಮಣಿ ಮೊದಲಾದ ಮಂತ್ರಗಳನು
ಪಂಥವನಾಡಿ ಕೊಡುವರು ೮೬

ಹೊತ್ತುಹೊತ್ತಿಗೆ ಪದುಮಿನಿದೇವಿಗೆ ತಾಪ
ವತ್ತಿ ಬರಲು ಕಂಡು ಭೂಪ
ಸುತ್ತಣ ಹಿರಿಯ ದಾದಿಯರ ಕರದು ದೈವ
ಕುತ್ತವಿದೆಂದು ಪೇಳಿದರು ೮೭

ಗಿರಿಜಾತೆಯರಸನಲ್ಲಿಗೆ ಹೋಗಿ ನೀವೆಲ್ಲ
ಪರಿಪರಿ ಪೂಜೆಯ ಮಾಡಿ
ತರಳೆ ಪದ್ಮಿನಿಗೆ ವರವ ಕರುಣಿಪುದೆಂದು
ವರನ ಕೇಳುವದು ನೀವೆಲ್ಲ ೮೮

ಚಂದಿರಮುಖಿಯ ಕೆಳದಿಯರು ಬರದಿಂದ
ಬಂದರು ಶಿವನಾಲಯಕೆ
ತಂದ ಕಾಣಿಕೆಯ ಮುಂದಿಟ್ಟು ಕೈಗಳ ಮುಗಿ
ದೆಂದರು ತಮ್ಮಭೀಷ್ಟೆಗಳ ೮೯

ದೇವ ಮುಕ್ಕಣ್ಣ ಸದಾಶಿವ ಮೂಲೋಕ
ಪಾವನ ಮದನಾರಿ ನಮ್ಮ
ಭಾವೆಪದ್ಮಿನಿಯ ತಾಪವ ಪರಿಹರಿಸೆಂದು
ಭಾವಕಿಯರೆರಗಿದರು ೯೦

ಸೊಲ್ಲನಾಲಿಸಿ ಬೇಗ ವಕುಳಮಾಲಿಕೆ ಯುವ-
ರೆಲ್ಲರ ಕರದು ಪ್ರೇಮದಲಿ
ಎಲ್ಲ ರೋಗವ ಬಿಡಿಸುವ ಮಂತ್ರ ತಂತ್ರವ
ಬಲ್ಲೆ ನಾನೆಂದು ಹೇಳಿದಳು ೯೧

ಕಡು ಜಾಣೆ ವಕುಳಮಾಲಿಕೆಯೆಂದ ನುಡಿಗೇಳಿ
ಸಡಗರಗೊಂಡು ದಾದಿಯರು
ಮಡದಿ ಬಾರೆಂದು ಕೈವಿಡಿದರಮನೆಯೊಳು
ವಡತಿಗೆ ಬಿನ್ನವಿಸಿದರು ೯೨

ಎಂದ ಮಾತಿಗೆ ರಾಯನರಸಿ ಸಂಭ್ರಮದಿಂದ
ಬಂದ ನಾರಿಯನುಪಚರಿಸಿ
ಕುಂದಗದನೆ ಪದ್ಮಿನಿ ಬಾಡಿ ಬಳುಕುವ
ಅಂದವ ತೋರಿದಳಾಗ ೯೩

ರಂಗು ನೀಲದ ಬಳೆಲಳೆಯವಾದವು ಬೆರ-
ಳುಂಗುರಗಳು ಸಡಲಿದವು
ಭೃಂಗಕುಂತಳೆ ನೋಡು ಮಗಳನೆನುತ ನೃಪ-
ನಂಗನೆ ಕರದು ತೋರಿದಳು ೯೪

ನೋಡಿ ಪದ್ಮಿನಿಯ ವಕುಳಮಾಲಿ ಶಿರವನ
ಲ್ಲಾಡಿ ಮೂಗಿಲಿ ಬೆರಳಿಟ್ಟು
ಆಗಲೀಸಿದ ಯೀರೋಗಕೌಷಧವನಾ
ಮಾಡುವೆನೆಂದು ಹೇಳಿದಳು ೯೫

ತಂಗಿಗೆ ವನದೊಳು ಮೂರುಲೋಕಂಗಳ
ನುಂಗುವ ಬಲುಭೂತ ಸೋಂಕಿ
ಭಂಗಬಡಿಸುತಿದೆ ಇದಕೆ ತಾಗುವ ಮಂ
ತ್ರಂಗಳುಂಟೆಂದು ಪೇಳಿದಳು ೯೬

ಉರಗಾದ್ರಿರಾಯ ರಾವುತನಾಗಿ ಬೇಂಟೆಗೆ
ಬರುತ ವನದೊಳಾಡುತಿರುವ
ಅರಸಿ ಪದ್ಮಿನಿಯ ಗಕ್ಕನೆ ಕಂಡು ಕಾಮಿಸಿ
ಮರುಳಾದಳೆಂದು ಪೇಳಿದಳು ೯೭

ರೂಪಿಲಿ ಮದನಗಿಮ್ಮಡಿಯಾದ ದೇವನ
ಈ ಪದುಮಿನಿ ಕಂಡು ಬಯಸೆ
ತಾಪವೆಗ್ಗಳಿಸಿತು ನಿನ್ನರಸಗೆ
ನೀ ಪೇಳೆಂದಳು ನಸುನಗುತ ೯೮

ಲೋಕವೀರೇಳು ಮೋಹಿಸುವ ದೇವನ ಕಂಡು
ಈಕೆ ಮೋಹಿಸುವದಚ್ಚರಿಯೆ
ಆಕಾಶರಾಯಗರುಹಿ ಬೇಗ ಮಗಳನು
ನೀ ಕೊಡಿಸಮ್ಮ ಶ್ರೀ ಹರಿಗೆ ೯೯

ವಕುಳಮಾಲಿಕೆಯೆಂದ ನುಡಿಗೆ ಪದ್ಮಿನಿಗಾಗ
ಮುಖಪಂಕಜವರಳಿದವು
ಅಕಳಂಕ ನಾರಿ ನೀನಾರೆಂದು ಕೇಳಲು
ಸುಖಭಾಷ್ಪದೊಳಗೊಲಾಡಿದಳು ೧೦೦

ಎಲ್ಲಿ ರಾವುತರಾಯನೆಂಬ ದೇವೋತ್ತಮ
ಬಲ್ಲೆಯ ನೀನವನಿರವ
ಇಲ್ಲಿಗೆ ಬಂದಕಾರಣವ ಯನಗೆ ನೀನು
ಸೊಲ್ಲಿಸೆಂದಳು ಪದುಮಿನಿಯು ೧೦೧

ಅಕ್ಕ ನಿನ್ನನು ನೋಡಿದಂದು ಮೊದಲು ದೇವ
ಲೋಕ ಸನ್ನಿ[ಹಿ]ತರ ಭೋಗಗಳ
ಚಿಕ್ಕವಳಾದರು ಚಮುರೆ ನೀನಹುದಮ್ಮ
ಸಿಕ್ಕಿದ ನಿನ್ನ ಮೋಹದಲಿ ೧೦೨

ಬಂದು ಬೇಂಟೆಗೆ ನಿನ್ನ ಕಂಡು ಮಾತಾಡಿಸು
ವಂದು ತಾ ಬೆರಳೊಳೊಟ್ಟಿರ್ದ
ಚಂದದ ಕುರುಹಿನುಂಗುರವ ನೀ ಕೊಳ್ಳೆಂದು
ತಂದು ಕೊಟ್ಟಳು ಪದುಮಿನಿಗೆ ೧೦೩

ಕಂಡು ಮುದ್ರಿಕೆಯನು ಪದ್ಮಿನಿ ಸಂತೋಷ
ಗೊಂಡು ಕಂಗಳಿಗೊತ್ತಿಕೊಂಡು
ಮಂಡೆಯ ಮೇಲಿಟ್ಟು ಮುದ್ದಾಡಿ ತನುಪ್ಪಟ್ಟಿ
ಕೊಂಡಾಡಿದಳು ಬಂದ ಸಖಿಯ ೧೦೪

ಈ ರೀತಿಯಲ್ಲಿ ಸಂಭ್ರಮಿಸುವ ಮಗಳನು
ಸಾರಿ ಧಾರುಣಿದೇವಿ ನೋಡಿ
ಭೂರಿ ಸಂತೋಷದಿಂದಲಿ ತನ್ನ ಪತಿಯಾದ
ಧಾರುಣೀಶಗರುಹಿದಳು ೧೦೫

ಬೊಮ್ಮನ ಜನಕ ಬೇಂಟೆಗೆ ಬಂದು ವನದೊಳು
ನಮ್ಮ ಮಗಳ ಕಂಡು ಭ್ರಮಿಸಿ
ಗಮ್ಮನೆ ಪೋದನೆಂಬುದ ಕೇಳಿ ನಾನೀಗ
ನಿಮ್ಮಡಿಗಳಿಗರುಹಿದೆನು ೧೦೬

ವಿಧುಬಿಂಬಮುಖಿ ಧಾರುಣಿದೇವಿ ರಾಯನ
ಪದಕೆ ವಂದಿಸಿ ಕೈ ಮುಗಿದು
ಪದುಮನಾಭನ ಕರಯಿಸಿ ಬೇಗ ಮಗಳನು
ಮದುವೆಯ ಮಾಡೆಂದಳಾಗ ೧೦೭

ಕೇಳಿ ಭೂಪಾಲ ಆನಂದ ಸಾಗರದೊಳ
ಗಾಳಿ ತುಂಬಿದ ಸಭೆಯೊಳಗೆ
ನಾಳಿದ್ದು ಹರಿಗೆ ಪದ್ಮಿನಿಯ ಕೊಡುವೆನೆಂದು
ಪೇಳಿ ಡಂಗುರವ ಸಾರಿಸಿದ ೧೦೮

ಕರದು ವಕುಳಮಾಲೆಗುಡುಗೊರೆಗಳನಿತ್ತು
ಬರಿಸು ಮಾಧವನ ಬೇಗೆನುತ
ಹರುಷದಿಂದವಳ ಬೀಳ್ಕೊಟ್ಟು ರಾಯರನೆಲ್ಲ
ಕರೆಯಲಟ್ಟಿದರು ದೂತರನು ೧೦೯

ಕುರುಜು ಚಪ್ಪರ ಮೇಲುಕಟ್ಟು ಕಟ್ಟಿಸಿ
ತರತರದ ತೋರಣಗಳ ಕಟ್ಟ
ಹರಿ ಬಂದು ಅಳಿಯನಾದರೆ ನಮ್ಮ ಭಾಗ್ಯಕೆ
ಸರಿಯಿಲ್ಲವೆಂದು ಉಬ್ಬಿದನು ೧೧೦

ಪದುಮಿನಿ ವಕುಳಮಾಲಿಕೆಯ ಮನ್ನಿಸಿ ತನ್ನ
ಚದುರಿನ ಗಿಣಿಯ ಕೊಡಿಟ್ಟು
ಪದಕವ ಹರಿಗೆ ಕುರುಹನಿತ್ತು ಬಿಗಿದಪ್ಪಿ
ಮಧುರ ಮಾತುಗಳನಾಡಿದಳು ೧೧೧

ಎನ್ನ ಪ್ರಾಣವ ಕಾಯ್ದ ವಕುಳ ಮಾಲಿಕೆ ಬೇಗ
ಪನ್ನಗಗಿರಿರಾಯ ಬಂದು
ಎನ್ನ ಕೈವಿಡಿವಂತೆ ಸಮಯವ ನೋಡಿ ನೀ
ಬಿನ್ನವಿಸೆಂದು ಪೇಳಿದಳು ೧೧೨

ಸತಿಯರ ಕೇಳ ಮೇಳಗಳಲ್ಲಿಯಿರುವಾಗ
ಇತರ ಚಿಂತೆಯೊಳಿರುವಾಗ
ಅತಿ ಹಸಿದಿರುವಾಗಲು ಮಾತನಾಡದೆ
ಮತಿವಂತೆಯೆಂದು ಪೇಳಿದಳು ೧೧೩

ಚದುರಂಗ ಪಗಡೆಯನಾಡುವ ಸಮಯದಿ
ಕುದುರೆ ಆನೆಯ ನೋಡುವಾಗ
ಪದ ಪದ್ಯ ಗದ್ಯವ ಕೇಳುವ ಸಮಯದಿ
ಇದ ಪೇಳಬೇಡೆಂದಳವಳು ೧೧೪

ಎಲ್ಲರ ಕಳುಹಿ ಒಂಟಿಯೊಳಿರುವಾಗ
ಉಲ್ಲಾಸದಿಂದಿರುವಾಗ
ತಲ್ಲಣಿಸದ ಚಿತ್ತವಿರುವಾಗ ನಾನೆಂದ
ಸೊಲ್ಲ ಪೇಳೆಂದಳಾ ತರುಣಿ ೧೧೫

ಇಂತೆಂದು ವಕುಳಮಾಲಿಕೆಯ ಕಳುಹಿ ತನ್ನ
ಚಿಂತೆಯ ದೂರ ತೊಲಗಿಸಿ
ಚಿಂತಾಮಣಿ ಗಿರಿರಾಯನ ಬರವ ಆ
ಕಾಂತೆ ಹಾರೈಸುತೊಪ್ಪಿದಳು ೧೧೬

ಅತ್ತಲಾ ವೇಂಕಟರಾಯನ ಹೃದಯದಿ
ಚಿತ್ತಜನಲರಂಬು ತಾಗಿ
ಕಸ್ತೂರಿತಿಲಕದ ಪದುಮಿನಿಯನು ನೆನೆ-
ವುತ್ತ ಬಾಡುವನಡಿಗಡಿಗೆ ೧೧೭

ಸೋಗೆಗಂಗಳ ನಮ್ಮ ವಕುಳಮಾಲಿಕೆ ಅಲ್ಲಿ
ಪೋಗುತ ದಾರಿ ತಪ್ಪಿದಳೊ
ಬಾಗಿಲಮುಂದಿ ಬಿಡದೆ ತಡೆದರೊ ಯಿದ
ಕೇಗೈವೆನೆಂದು ಚಿಂತಿಸಿದ ೧೧೮

ದಿವಸ ಹೆಚ್ಚಿತು ನಮ್ಮ ವಕುಳಮಾಲಿಕೆ ಪೋಗಿ
ಅವರೇನೆಂದು ಪೇಳಿದರೊ
ಸವತಿಯ ಬದುಕೆಂದು ಪದ್ಮಿನಿ ಮಲತಳೊ
ತವಕಗೊಂಡನು ಮನದೊಳಗೆ ೧೧೯

ಇಂತೆಣಿಸುತ ಹರಿಯಿರುತಿರೆ ನಾನೆಂದ
ಸಂತ ಸಂದಿತುಯೆಂದು ನಗುತ
ಕಾಂತೆಯರರಸಿ ವಕುಳಮಾಲಿಕೆ ಬೇಗ ಶ್ರೀ
ಕಾಂತಗೆ ಬಂದೆರಗಿದಳು ೧೨೦

ನಗುತ ಬಂದೆರಗಿದ ವಕುಳಮಾಲಿಕೆಯನು
ಬಿಗಿದಪ್ಪಿ ನೀಪೋದ ಕಾರ್ಯ
ವಿಗಡವಿಲ್ಲದೆ ಸಾಧ್ಯವಾಯಿತೆನುತಾಗ
ಖಗರಾಜಗಮನ ಕೇಳಿದನು ೧೨೧

ರಂಗ ನಿನ್ನೊಡನೆ ಮಾತಾಡಿ ಬಾರೆಂದಂತ-
ರಂಗ ಸೊಬಗಿನ ಕಣಿಯ
ಸಾಗರಶಯನ ಕೇಳಿನ್ನ ಬಿನ್ನಪವ ನಾ
ಪೋಗಿ ಆ ಭೂಪಾಲನೊಡನೆ ೧೨೨

ಲೋಗರರಿಯದಂತೆ ಮಾತಾಡಿ ಕಾರ್ಯವ
ಆಗುಮಾಡಿದೆನೆಂದಳವಳು
ತುಂಗ ಕುಚದ ಪದುಮಿನಿ ಕಳುಹಿದಳೆಂದು
ಮುಂಗೈಯ ಮೇಲಿರಿಸಿದಳು ೧೨೩

ಚನ್ನೆ ಪದ್ಮಿನಿ ಕಳುಹಿದ ಮುದ್ದುಗಿಳಿಯನು
ಮನ್ನಿಸಿ ಉರದೊಳಗಪ್ಪಿ
ಚನ್ನಾಗಿ ಕದಳಿಯ ಫಲ ಪಾಯಸಂಗಳ
ತನ್ನ ಕೈಯಾರೆದ ಊಸಿಡಿ ೧೨೪

ಅರೆಗಿಳಿ ರೆಕ್ಕೆಯನೊದರಿ ಕಂಠವನೆತ್ತಿ
ಹರಿಯ ಮೊಗವ ನೋಡಿ ನಗುತ
ಅರಸಿ ಪದ್ಮಿನಿಯೆಂದಮಾತ ಪೇಳಿತು ನಾಗ
ಗಿರಿರಾಯನೊಡನೆ ವಿಸ್ತರಿಸಿ ೧೨೫

ಅಂದು ನಿನ್ನನು ಕಂಡು ಮನಸೋತು ಮರುಳಾಗಿ
ಕಂದಿ ಕಾಹೇರಿ ಬಳಲುತ
ಬಂದು ವೆಂಕಟರಾಯನೆನ್ನ ಕೈಗೂಡುವ
ನೆಂದಿಗೆನುತ ಹಲುಬುವಳು ೧೨೬

ಅಸುರಾರಿ ನೀ ಬೇಗ ಪೋಗದಿರ್ದಡೆ ನಮ್ಮ
ಶಶಿಮುಖಿ ಪದುಮಿನಿಗೀಗ
ದಶಮಾವಸ್ಥೆಯಾಗುವದೆನ್ನ ನುಡಿಯೊಗ
ಪುಸಿಯಲ್ಲವೆಂದಿತಾಗ ೧೨೭

ನಾಳೆ ಮದುವೆ ಗುಡಿ ತೋರಣಗಳ ಕಟ್ಟಿ
ಹೇಳು ಪದ್ಮಜ ಮೊದಲಾದ
೧(ಬಾ)೧ಳದೇವತೆಗಳ ಕರಸುಯೆಂದೆನುತಾಗ
ಪೇಳಿತು ಸೊಬಗುಳ್ಳ ಗಿಣಿಯು ೧೨೮

ಪನ್ನೀರ ಮಿಂದು ಪಟ್ಟೆಯನುಟ್ಟು ಯಸೆವ ಬಾ
ವನ್ನ ಕುಂಕುಮಗಳ ಪೂಸಿ
ರನ್ನದಾಭರಣವ ತರಿಸಿ ನೀ ಧರಿಸೆಂದು
ಬಿನ್ನವಿಸಿತು ಮುದ್ದುಗಿಳಿಯು ೧೨೯

ಸುತ್ತಿದ ಶಿಖೆಗೆ ಮಲ್ಲಿಗೆ ಮೊಲ್ಲೆ ಜಾಜಿಯು
ಕಸ್ತುರಿ ತಿಲಕವ ತಿದ್ದಿ
ಸುತ್ತ ಸುರರು ಜಯವೆಂದು ಪೊಗಳೆ ಪುರು-
ಷೋತ್ತಮ ಪೊರವಂಟನಾಗ ೧೩೦

ಮೊರೆವ ದುಂದುಭಿ ಶಂಖ ಕಹಳೆ ಮುಂದೆಸೆಯಲು
ಗರುಡನ ಪೆಗಲೇರಿ ಉರುಗ
ಗಿರಿಯಲ್ಲಿ ಮೆರದು ಪದ್ಮಿನಿದೇವಿಯಸೆದಿಪ್ಪ
ಪುರಕೆ ಬಂದನು ನಲವಿನಲಿ ೧೩೧

X X X X ೧೩೨

ಹರಿಬಂದನೆಂಬ ವಾರ್ತೆಯಕೇಳಿ ಆಕಾಶ
ಧರಣೀಶ ಪರಿಜನ ಸಹಿತ
ಪರಮ ಸಂಭ್ರಮದಿಂದ ಯಿದಿರುಗೊಂಡನು
ಕರಕಮಲಂಗಳ ಮುಗಿದು ೧೩೩

೧ಬಹ೧ x೧೩೨ನೇ ಪದ್ಯವಿಲ್ಲ

ಪಾದಾರವಿಂದಕೆರಗಿ ಯಿಂದು ನಾ ಧನ್ಯನಾದೆ-
ನೆಂದೆನುತ ಕೊಂಡಾಡಿ
ವೇದಾಂತವೇದ್ಯನ ಪೊಡಗೊಂಡು ಹರುಷದಿ
ಪೋದನು ತನ್ನರಮನೆಗೆ ೧೩೪

ಪೊಡವಿಗೊಡೆಯ ಬಂದನೆಂದೆಂಬ ವಸಗೆಯ
ಕಡು ಮುದ್ದುಗಿಳಿ ಪಾರಿ ಬಂದು
ಮಡದಿ ಪದ್ಮಿನಿಯ ಮುಂಗೈಯ್ಯ ಮೇಲೆಸೆದಿರ್ದು
ನುಡಿಯಿತು ಅತಿ ಹರುಷದಲಿ ೧೩೫

ಪದುಮಿನಿ ನಿನ್ನಯ ಪ್ರಾಣದೆರೆಯನೀಗ
ಒದಗಿ ಬಂದನು ನಮ್ಮಪುರಕೆ
ಮದುವೆ ನಾಳೆಯದಿನ ಶೃಂಗಾರವಾಗೆಂದು
ಮಧುರವಾರ್ತೆಯನಾಡಿತಾಗ ೧೩೬

ಆ ಗಿಳಿಯಂದ ಮಾತಿಗೆ ಪದುಮಿನಿ ಸುಖ
ಸಾಗರದೊಳಗೆಪೋಲಾಡಿ
ಬೇಗ ಸಕ್ಕರೆವೆರಸಿದ ಚಿಲುಪಾಲು ಯಿ
ತ್ತಾಗ ಮ್ಮುಂಡಾಡುತಪ್ಪಿದಳು ೧೩೭

ದೇವಿ ಪದ್ಮಿನಿಗೆ ಮಜ್ಜನವ ಮಾಡಿಸಿ ಬೇಗ
ದೇವಲೋಕದ ವನಿತೆಯರು
ಶ್ರೀವೆಂಕಟೇಶಗೆ ವಧುವಾಗೆನುತ ಚಂದ್ರ
ಗಾವಿಯತಂದುಡಿಸಿದರು ೧೩೮

ಕಾಲಿಗುಂಗುರವಿತ್ತು ಕಾಂಚಿಧಾಮವ ಕಟ್ಟಿ
ನೀಲದುಂಗುರಗಳನಿಟ್ಟು
ಮೇಲಾದ ಕಡಗ ಕಂಕಣ ಸೂಡಗವನಾಗ
ಲೋಲೆಗೆ ಅಳವಡಿಸಿದರು ೧೩೯

ಪವಳ ಮುತ್ತಿನ ಸರಗಳ ಕೊರಳಿಗೆ ಹಾಕಿ
ನವರತ್ನದವಾಲಿಯಿಟ್ಟು
ಯುವತಿಯರರಸಿ ಪದುಮಿನಿದೇವಿಗೆ ಬೇಗ
ವಿವಿಧಾಭರಣವನಿಕ್ಕಿದರು ೧೪೦

ಎಸೆವ ಕಂಗಳಿಗಂಜನವನೆಚ್ಚು ನೊಸಲಿಗೆ
ಪೊಸ ಕಸ್ತುರಿ ಬೊಟ್ಟನಿಟ್ಟು
ಕುಸುಮದ ವೊಗ್ಗೆಯ ಮುಡಿಸಿ ಕನ್ನಡಿಯನು
ಬಿಸಜಗಂಧಿಯರು ತೋರಿದರು ౧೪౧

ಸರಸಿಜಾಸನನ ಪಟ್ಟದರಾಣಿ ಸೇಸೆಯು
ಹರಸಿ ತಳಿದಳು ಪದ್ಮಿನಿಗೆ
ಗಿರಿಜೆ ಕಂಕಣದಾರವನು ಕಟ್ಟಿದಳು ಮಿಕ್ಕ
ಸುರತರುಣಿಯರು ಪಾಡಿದರು ౧೪೨

ಮಂದಗಮನೆ ಪದುಮಿನಿ ವೆಂಕಟರಾಯಾ
ನಂದದಿ ಹಸೆಯ ಮೇಲೆಸೆಯೆ
ಬಂದು ವಸಿಷ್ಠಾದಿ ಮುನಿಗಳು ಮಂತ್ರಗ
ಳಿಂದ ಹೋಮಗಳ ಮಾಡಿದರು ౧೪೩

ಚನ್ನೆ ಪದ್ಮಿನಿಯ ಆಕಾಶಭೂಪಾಲನು
ತನ್ನ ತೊಡೆಯಲಿ ಕುಳ್ಳಿರಿಸಿ
ಕನ್ಯಾವರಣ ಮಂತ್ರ ವಿಪ್ರೋತ್ತಮರು ಬೇಗ
ವರ್ನಿಸಿದರು ಸಭೆಯೊಳಗೆ ౧೪೪

ಕದನಪ್ರಚಂಡ ಆಕಾಶಭೂಪಾಲನು
ಮದನನಪಡೆದ ದೇವನಿಗೆ
ಮಧುಪರ್ಕ ಮೊದಲಾದ ಉಪಚಾರಗಳ ಮಾಡಿ
ಪದುಮಿನಿಯನು ಧಾರೆಯೆರೆದ ౧೪೫

ದೇವದುಂದುಭಿ ಮೊಳಗಿದವು ಅಂಬರದಲ್ಲಿ
ದೇವಗನ್ನಿಕೆಯರಾಡಿದರು
ದೇವಾದಿ ಸುರರೆಲ್ಲ ಸೇರದು ಸಂಭ್ರಮದಿಂದ
ಹೂವಿನಮಳೆಯ ಚಲ್ಲಿದರು ౧೪౬

ನಸುನಗೆಮೊಗದ ಪದ್ಮಿನಿಯ ಪಾದವ ತಂನ
ಯೆಸೆವ ಹಸ್ತದಿ ಪಿಡಿದೆತ್ತಿ
ಅಸೆಯಕಲ್ಲಿನಮೇಲಿ ಯಿರಿಸಿ ಲಾಜಾಹೋಮವ
ದಶಕಂಠವೈರಿ ಮಾಡಿದನು ౧೪౭

ಚಪ್ಪನ್ನದೇಶದೇಶದ ರಾಯರೆಲ್ಲರು ತಂದ
ಕಪ್ಪ ಕಾಣಿಕೆಯ ಮುಂದಿಟ್ಟು
ಸರ್ಪಶಯನನಂಘ್ರಿಗೆರಗಿ ಕೈಗಳಮುಗಿ
ದೊಪ್ಪಿದರೆರಡು ದಿಕ್ಕಿನಲಿ ೧೪೮

ಸರಸಿಜೋದ್ಭವ ಮೊದಲಾದ ಸುರರು ರತ್ನಾ
ಭರಣವ ತಂದೊಪ್ಪಿಸಿದರು
ಗರುಡ ಗಂಧರ್ವ ತುಂಬುರ ನಾರದಾದ್ಯರು
ತರತರದಿಂದ ಪಾಡಿದರು ೧೪೯

ಸೋಮುನಪಟ್ಟದರಸಿ ಮೊದಲಾಗಿರ್ಪ
ಭಾಮಿನಿಯರು ನಲವಿನಲಿ
ಹೇಮಲತಾಂಗಿ ಪದ್ಮಿನಿಗು ವೆಂಕಟಶೈಲ
ಧಾಮಗಾರತಿಯನೆತ್ತಿದರು ೧೫೦

ಆಕಾಶರಾಯ ಆನಂದ ಮಾನಸನಾಗಿ
ಬೇಕಾದ ರತ್ನಭೂಷಣವ
ಲೋಕನಾಯಕನ ಮುಂದಿರಿಸಿ ಕೈಮುಗಿದು ಅಂ
ಗೀಕರಿಸೆಂದು ಪೇಳಿದನು ೧೫೧

ತಂಡತಂಡದ ಸವಿ ಊಟಂಗಳನು ಆಗ
ಉಂಡು ತೇಕಿತು ಸರ್ವಜನರು
ಮುಂಡೆಯ ಅಲೆವುತ ನೃಪನ ಔದಾರ್ಯವ
ಕೊಂಡಾಡಿತು ಸರ್ವಜನವು ೧೫೨

ನೆರದ ನಾನಾಜನಕುಡುಗೆರೆಗಳನಿತ್ತು
ಕರದು ಕರ್ಪೂರ ವೀಳ್ಯವಿತ್ತು
ಪರಮ ಸಂಭ್ರಮದಿಂದ ದಿನನಾಲ್ಕು ಈ ಪರಿ
ಮೆರೆಯಿತು ಅರಮನೆಯೊಳಗೆ ೧೫೩

ಮರುದಿನ ಆಕಾಶಭೂಪಾಲ ಭೋಜನಾಂ
ತರದಲ್ಲಿ ಸಕಲರೊಂದಾಗಿ ಸಕಲ
ಸಂಭ್ರಮದಲೋಕುಳಿಯಾಡಬೇಕೆಂದು
ಹಂಗೆ ಬಿನ್ನಹವ ಮಾಡಿದನು ೧೫೪

ಚಿನ್ನದ ಸೋಪಾನ ಸುತ್ತಲೆಸವುತಿಹ
ಉನ್ನತವಹ ಕೊಳಗಳಲಿ
ಬಿನ್ನಣದಿಂದ ಕುಂಕುಮವೆರಸಿದ ದಿವ್ಯ
ಪನ್ನೀರತಂದು ತುಂಬಿದರು ೧೫೫

ದಿಕ್ಕುದಿಕ್ಕಿಗೆ ಮಘಮಘಿಪ ಚಂದನಗಳ
ತಿಕ್ಕಿಕೊಂಡರು ಉರದೊಳಗೆ
ಚೊಕ್ಕ ಕಸ್ತುರಿಯ ಮರ್ದಿಸಿ ನೊಸಲಿಗೆ ಬೊಟ್ಟ
ನಿಟ್ಟು ಕಮ್ಮಲರ ಸೂಡಿದರು ೧೫೬

ಒಂದು ದಿಕ್ಕಿಲಿ ನಾಗಾರಿರಾಜ ಕಮಲಜ
ಇಂದ್ರ ಮುಕ್ಕಣ್ಣಾದಿ ಸುರರು
ಬಂದು ಕ್ರೀಡಾಕೋಳಕಿಳಿದು ಹೊನ್ನಂಡೆಗ
ಳಿಂದ ವೋಕುಳಿಯನಾಡಿದರು ೧೫೭

ರಾಜಾಧಿಪತಿಗಳೊಡನೆ ಬಂದು ಆಕಾಶರಾಯ
ಸಂಭ್ರಮದಲೋಕುಳಿಯ
ಗಾಜುಗುಪ್ಪಿಗೆ ನೇತ್ರಪೊಟ್ಟಣದಲಿ ತುಂಬಿ
ಸೋಜಿಗದಿಂದಲಾಡಿದರು ೧೫೮

ಪದುಮಜನರಸಿ ಪಾರ್ವತಿದೇವಿ ಮೊದಲಾದ
ಚದುರೆಯರೆಲ್ಲವೊಗ್ಗಿನಲಿ
ಮದವೇರಿದಾನೆಗಳಂತೆ ವಸಂತವ
ಪದುಮಿನಿಯೊಡನೆ ಆಡಿದರು ೧೫೯

ಅರಮನೆಯೊಳಗೆ ಧಾರಿಣಿದೇವಿ ವಾಕ್ಯದಿಂ
ಸೊಬಗುಳ್ಳ ವೇಶ್ಯಾಂಗನೆಯರು
ಸೊಗಸಾದ ವಿಟರಮೇಲೆ ಶೃಂಗಾರರಸಗಳ
ಭಾಷೆಯನಾಡಿ ಚೆಲ್ಲಿದರು ೧೬೦

ಅರಮನೆಯೊಳಗೆ ಧಾರಿಣಿದೇವಿಯೊಡಗೂಡಿ
ದೊರೆದೊರೆಗಳ ರಮಣಿಯರು
ಮೆರೆಯೆ ಜೀರ್ಕೊಳವೆಗೆ ತುಂಬಿ ವಸಂತವ
ಪರಮಸಂಭ್ರಮದಲಾಡಿದರು ೧೬೧

ಒಡನಡು ಬಳುಕೆ ಮೇಲುದು ಸರಿಯಲು ಕೈಯ
ಕಡಗ ಕಂಕಣ ಝಣರೆನಲು
ಎಡವಿಡದಿಹ ಕುಚ ಬಿಗುಹೇರೆ ಸತಿಯರು
ಬೆಡಗಿಂದೋಕುಳಿಯನಾಡಿದರು ೧೬೨

ತುರುಬಿದ ಮಲ್ಲಿಗೆ ಅರಳುಗಳುದುರಲು
ಪರಿದವು ಕಂಠಮಾಲೆಗಳು
ಕರಕಮಲಂಗಳ ಸೆರಹಿ ವಸಂತವ ಸಡ-
ಗರದಿಂದಲಾಡಿದರು ೧೬೩

ಉಟ್ಟದುಕೂಲ ನನದು ಮೈಯೊಳೊಂದಲು
ಬಟ್ಟಕುಚಗಳು ನುಣ್ದೊಡೆಯು
ಬೆಟ್ಟವ ಸೋಲಿಪ ಪೊರವಾರುಗಳಲಿ ಕ–
ಣ್ಣಿಟ್ಟು ಮೋಹಿಸಿದರಾ ವಿಟರು ೧೬೪

ತರತರದಿಂದ ಯಿೂ ಪರಿ ವಸಂತವನಾಡಿ
ಹರುಷದಿ ಸಂತುಷ್ಟರಾಗಿ
ಸರಸಿಜೋದ್ಭವ ಮೊದಲಾದ ಸರ್ವರು ಬಂದು
ಕರವ ಮುಗಿದರು ಶ್ರೀ ಹರಿಗೆ ೧೬೫

ಬೇಕಾದ ವಸ್ತ್ರ ಭೂಷಣಗಳ ತರಿಸಿದ
ಆಕಾಶರಾಯನೆಲ್ಲರಿಗೆ
ಸಾಕು ಸಾಕೆಂಬಂತೆ ಕೊಟ್ಟು ಮನ್ನಿಸಿ ಜಗ
ದೇಕನಾಯಕಗೆ ವಂದಿಸಿದ ೧೬೬

ಅಗಣಿತವಾದ ವಸ್ತ್ರಾಭರಣಗಳ
ಮಗಳಿಗೆ ಬಳುವಳಿಯಿತ್ತು
ನಗಧರನಿಗೆ ನಿತ್ಯಭೂಷಣಂಗಳನಿತ್ತು
ಮುಗಿದನು ಕರಕಮಲಗಳ ೧೬೭

ಮುನ್ನ ಈರೇಳುಜನ್ಮದ ಪುಣ್ಯಫಲದಿಂದ
ನಿನ್ನ ಮೂರುತಿಯನು ಕಂಡೀಗ
ಧನ್ಯನಾದೆನು ದೇವಯೆಂದು ಸಂತೋಷದಿಂ
ಬಿನ್ನವಿಸಿದನು ಶ್ರೀ ಹರಿಗೆ ೧೬೮

ಈಪರಿಯಲಿ ಬಿನ್ನಹವ ಮಾಡುತಿರ್ದ
ಭೂಪಾಲನ ನೋಡಿ ವೈದಡವಿ
ತಾಪ ಮೂರನು ನೀಗಿ ಬೇಡಿದಿಷ್ಟಾರ್ಥವ
ಶ್ರೀಪತಿಯೊಲಿದು ಪಾಲಿಸಿದ ೧೭೯

ಮದ್ದಳೆ ಭೇರಿ ಕಹಳೆ ಶಂಖವೆಸೆಯಲು
ಖದ್ರುಸುತಾರಿಯನೇರಿ
ಮುದ್ದು ಮೊಗದ ಪದುಮಿನಿಯ ತೊಡೆಯೊಳಿಟ್ಟು
ಎದ್ದಾನು ಅರಮನೆಯಿಂದ ೧೮೦

ಪಟ್ಟಣದವರೆಲ್ಲ ತಮ್ಮ ಬಾಗಿಲ ಮುಂದೆ
ಸೃಷ್ಟೀಶ ಬರುತಿರೆ ಕಂಡು
ಕಟ್ಟಾಣಿಮುತ್ತಿನಾರತಿಯ ತಂದೆತ್ತಿ ತ
ಮ್ಮಿಷ್ಟಾರ್ಥಗಳ ಬೇಡಿದರು ೧೮೧

ಅಲ್ಲಿಗಲ್ಲಿಗೆ ಕಪ್ಪಕಾಣಿಕೆಗಳನು ತಂದು ತ
ಮ್ಮೊಲ್ಲಭೆಯನು ಮನ್ನಿಸುತ
ನಿಲ್ಲದೆ ದೈತ್ಯಾರಿ ಪಯಣ ಬಂದನು ತನ್ನ
ದಲ್ಲಣದಂಜನಗಿರಿಗೆ ೧೮೨

ಕಡು ಮುದ್ದು ಅಲಮೇಲುಮಂಗನಾಯಕಿ ಬಲ
ಗಡೆಯೊಳೊಪ್ಪಿದಳು ಪದ್ಮಿನಿಯು
ಎಡದಭಾಗದಲೊಪ್ಪಿದರವರೀರ್ವರ
ನಡುವೆ ವೇಂಕಟರಾಯನಿರ್ದ ೧೮೩

ಇಂದ್ರಾದಿ ಮನು ಮುನಿಸುರರೆಲ್ಲರು
ಬಂದು ನಿಂದರಿಕ್ಕೆಲದ ವಾಲಗದಿ
[ಬಂದೆ]ಲ್ಲರ ಮನ್ನಿಸಿ ಉಡುಗೊರೆಗಳನಿತ್ತು ತ
ನ್ನೊಲ್ಲಭೆಯರ ಮೊಗನೋಡಿ ೧೮೪

ಸಲ್ಲಾಪ ಸರಸಗೋಷ್ಠಿಗಳಿಂದ ಕನಕಾದ್ರಿ
ಯಲ್ಲಿಹ ಕಾಂತನೊಪ್ಪಿದನು
ಸಲ್ಲಾಪ ಸರಸಗೋಷ್ಠಿಗಳಿಂದ ಕನಕಾದ್ರಿ
ಯಲ್ಲಿಹ ಕಾಂತನೊಪ್ಪಿದನು ೧೮೫

ದೇವಭೂಪಾಲ ಸಂತವಿಸಿದ ಮಗಳು
ಶೃಂಗಾರದ ಮಾತೆಯೆಂಬವಳು
ಚಿಂತಾಮಣಿ ದೇಶಿಕೇಂದ್ರನ ತನಯುಳು
ಇಂತೆಂದು ಪೇಳ್ದಳೀಕಥೆಯ ೧೭೬

ಪದನೂರಮೇಲೆ ೧[ಎಪ್ಪ]೧ತ್ತಾರು ತಪ್ಪದೆ
ಇದ ಪೇಳೆ ಕೇಳಿದ ಜನರ
ಹೃದಯಕಮಲದಲ್ಲಿ ನೆಲಸಿಯಿಷ್ಟಾರ್ಥವ
ಪದುಮಿನಿಯರಸ ಪಾಲಿಸುವ ೧೭೭



---
೧ಯೆಂಬ೧

# ತುಮಕೂರು ಜಿಲ್ಲೆಯ
# ಬೃಹತ್ ಶಿಲಾಯುಗದ ನಿಲುವುಗಲ್ಲು (Menhir) ಗಳು.

ಡಾ|| ಡಿ. ವಿ. ಪರಮಶಿವಮೂರ್ತಿ

ಕರ್ನಾಟಕದಲ್ಲಿ ತುಮಕೂರು ಜಿಲ್ಲೆಯು ಪ್ರಾಗೈತಿಹಾಸ ಅಧ್ಯಯನಕ್ಕೆ ಮಹತ್ವದ ಕೊಡುಗೆಯನ್ನು ನೀಡಿದೆ. ಈ ದೃಷ್ಟಿಯಿಂದ ತುಮಕೂರು ಜಿಲ್ಲೆಯನ್ನು ಪ್ರಾಗೈತಿಹಾಸಿಕಆಗರವೆಂದರೂ ತಪ್ಪಾಗಲಾರದು.

ಈ ಜಿಲ್ಲೆಯ ಕಿಬ್ಬನಹಳ್ಳಿ, ಬೀಗರೆ, ನಿಡುಗಲ್ಲು, ಹಿರೇಗುಂಡಗಲ್ಲು, ಬೆಳ್ಳಿ ಬಟ್ಟಲು, ಕೇರಳಕಟ್ಟೆ ಹೀಗೆ ಇನ್ನೂ ಹಲವಾರು ಸ್ಥಳಗಳಲ್ಲಿ ಮಹತ್ವದ ಪ್ರಾಗೈತಿಹಾಸಿಕ ನೆಲೆಗಳು ಕಂಡುಬಂದಿವೆ. ಶ್ರೀ. ಬಿ. ಎಲ್. ರೈಸ್‌ರವರಿಂದ ಈ ಜಿಲ್ಲೆಯ ಪ್ರಾಗೈತಿಹಾಸಿಕ ಅಧ್ಯಯನವು ಆರಂಭವಾಗಿ ಪ್ರೊ|| ಎಂ. ಎಚ್. ಕೃಷ್ಣ, ಡಾ|| ಎಂ. ಶೇಷಾದ್ರಿ. ರಾಬರ್ಟ್‌ಪೂಟ್ ವೊದಲಾದವರಲ್ಲದೆ ಇತ್ತೀಚೆಗೆ ಶ್ರೀ. ಕೆ. ಬಿ. ಶಿವತಾರಕ್ ಮೊದಲಾದವರ ಶ್ರಮದಿಂದ ಹೊಸ ಹೊಸ ನೆಲೆಗಳು ಬೆಳಕಿಗೆ ಬಂದಿವೆ.[1]

ಇತ್ತೀಚೆಗೆ ಕೋರಾ ಹೋಬಳಿಯ ಶಾಸನಗಳ ಪರಿವೀಕ್ಷಣಾ ಕಾರ್ಯ ಕೈಗೊಂಡಿದ್ದ ಸಮಯದಲ್ಲಿ ಹಲವಾರು ಪ್ರಾಗೈತಿಹಾಸಕಾಲದ ನೆಲೆಗಳು ಕಂಡುಬಂದವು. ಅವುಗಳಲ್ಲಿ ಬಹಳ ಮುಖ್ಯವಾದದ್ದು ಕೋರಾಕ್ಕೆ ಪೂರ್ವಭಾಗದಲ್ಲಿರುವ ಚಿನಗ ಎಂಬ ಗ್ರಾಮದ ಬಳಿ ದೊರೆತಿರುವ ಬೃಹತ್ ಶಿಲಾಯುಗದ ನೆಲೆಗಳು.

ಚಿನಗ ಗ್ರಾಮದ ಪಶ್ಚಿಮಕ್ಕೆ ರಸ್ತೆಯ ಎಡ ಮತ್ತು ಬಲ ಬದಿಗಳಲ್ಲಿ ಒಂದೊಂದು ನಿಲುವುಗಲ್ಲು (Menhir)ಗಳು ಪತ್ತೆಯಾಗಿವೆ. ಈ ಎರಡು ನಿಲುವುಗಲ್ಲುಗಳು ಉತ್ತರ–ದಕ್ಷಿಣ ದಿಕ್ಕಿಗೆ ಮುಖಮಾಡಿದ್ದು, ಬಹಳ ಸುಸ್ಥಿತಿಯಲ್ಲಿವೆ. ದಾರಿಯ ಬಲ ಬದಿಗೆ ಇರುವ ನಿಲುವುಗಲ್ಲು ಉತ್ತರದಿಕ್ಕಿಗೆ ವಾಲಿಕೊಂಡಿದೆ. (ಚಿತ್ರನೋಡಿ).

**ಅಳತೆ :– ರಸ್ತೆಯ ಬಲಬದಿಯ ನಿಲುವುಗಲ್ಲು (Menhir).**

ಎತ್ತರ 5.2 ಮೀಟರ್
ಅಗಲ 2.29 ಮೀಟರ್
ದಪ್ಪ (ತಳಭಾಗ) 22 ಇಂಚುಗಳು. (56 ಸೆಂಟಿಮೀಟರ್)
–,,– (ಮಧ್ಯಭಾಗ) 15 ಇಂಚುಗಳು. (38 ಸೆಂಟಿಮೀಟರ್)
–,,– (ತುದಿಭಾಗ) 10 ಇಂಚುಗಳು. (25 ಸೆಂಟಿಮೀಟರ್)

---

1. ಇತಿಹಾಸದರ್ಶನ, ಸಂಪುಟ 7 (1992), 8 (1993), 9 (1994).
ಪ್ರಜಾವಾಣಿ. ಜುಲೈ–1–1988 (ವರದಿ)

ಶಿಲೆಯು ಕೆಂಪು ಅಥವಾ ಕಾವಿ ಬಣ್ಣಕ್ಕೆ ತಿರುಗಿದ್ದು, ಮೈಮೇಲೆ ಕಪ್ಪು ಹಾಗೂ ಬಿಳಿ ಮಚ್ಚೆಗಳಿವೆ. ಶಿಲೆಯ ಎರಡೂ ಕಡೆಯ ಮೈಯನ್ನು ನಯವಾಗಿ ಕೆತ್ತಲಾಗಿದೆ.

**ರಸ್ತೆಯ ಎಡಬದಿಯ ನಿಲುವುಗಲ್ಲು**

ಎತ್ತರ 4.18 ಮೀಟರ್
ಅಗಲ 2.35 ಮೀಟರ್
ದಪ್ಪ (ತಳಭಾಗ) 10 ಇಂಚುಗಳು (25 ಸೆಂಟಿಮೀಟರ್)
–,,– (ಮಧ್ಯಭಾಗ) 12 ಇಂಚುಗಳು (30 ಸೆಂಟಿಮೀಟರ್)
–,,– (ತುದಿಭಾಗ) 7 ಇಂಚುಗಳು (18 ಸೆಂಟಿಮೀಟರ್)

ಈ ನಿಲುವುಗಲ್ಲು ಬಹಳ ಭದ್ರವಾಗಿದ್ದು ಬಹುಶಃ ಮೂಲರೂಪದಲ್ಲೇ ಉಳಿದು ಬಂದಿದೆ. ನೇರವಾಗಿ ನಿಂತಿರುವ ಈ ಶಿಲೆಯ ಸುತ್ತಲ ಅಂಚನ್ನು ಚೂಪುಗೊಳಿಸಿದಂತೆ ಕಂಡುಬರುತ್ತದೆ. ಆದರೆ ಕಲ್ಲಿನ ಮೈ ಒರಟೊರಟಾಗಿ ನಿರ್ಮಾಣಗೊಂಡಿದ್ದು, ಕಪ್ಪು ಮಚ್ಚೆಗಳಿಂದ ಕೂಡಿದ್ದು ಕಾವಿ ಬಣ್ಣಕ್ಕೆ ತಿರುಗಿದೆ.

ಈ ಎರಡೂ ನಿಲುವುಗಲ್ಲುಗಳ ಪೂರ್ವಕ್ಕೆ ಅನತಿದೂರದಲ್ಲಿ ಬೃಹತ್ ಶಿಲಾ ಯುಗಕ್ಕೆ ಸೇರಿದ ಎರಡು ಚಪ್ಪಡಿ ಹೊದಿಕೆಯ ಸಮಾಧಿಗಳೂ ಇವೆ.

ಬೃಹತ್ ಶಿಲಾಯುಗ ಕಾಲಕ್ಕೆ (ಕಿ. ಪೂ. 5000–3000) ಸೇರಿದ ಇಂತಹ ನಿಲುವುಗಲ್ಲುಗಳು ಇದೂವರೆಗೂ ತುಮಕೂರು ಜಿಲ್ಲೆಯಲ್ಲಿ ಪತ್ತೆಯಾಗಿರಲಿಲ್ಲ. ಈ ರೀತಿಯ ಸಮಾಧಿಗಳು ಕರ್ನಾಟಕದಲ್ಲಿ ಹೆಚ್ಚಾಗಿ ದೊರೆತಿಲ್ಲ. ಶಿವಮೊಗ್ಗ ಜಿಲ್ಲೆಯ ನಿಲಸಗಲ್. ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ಸೌಡಮ್ಮಬೆಟ್ಟ, ರಾಯಚೂರು ಜಿಲ್ಲೆಯ ಮಸ್ಕಿ, ಪೀಕ್ಲಿಹಾಳ್, ಗುಲ್ಬರ್ಗ ಜಿಲ್ಲೆಯ ವಿಭೂತಿಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಕೋಲಾರ ಜಿಲ್ಲೆಯ ಪೆರೇಸಂದ್ರ ಮತ್ತು ಇನ್ನೂ ಒಂಡೆರಡುಕಡೆ ದೊರಕಿವೆ.[2]

**ವಿಶೇಷತೆ:–**

ಡಾ॥ ಅ. ಸುಂದರ ಅವರ ಸರ್ವೇಕ್ಷೆಯ ಪ್ರಕಾರ ಇದುವರೆಗೂ ಕರ್ನಾಟಕದಲ್ಲಿ ದೊರಕಿರುವ ಎತ್ತರವಾದ ನಿಲುವುಗಲ್ಲು ಎಂದರೆ ಅದು 3.40 ಮೀಟರ್ ಎತ್ತರವಿರುವ ಪೆರೇಸಂದ್ರ ಗ್ರಾಮದ್ದಾಗಿದೆ. ಪ್ರಸ್ತುತ ಈ ನಿಲುವುಗಲ್ಲುಗಳು ಅದಕ್ಕಿಂತ 1.62 ಮೀಟರ್ ಎತ್ತರವಾಗಿದೆ. ಈ ಅಂಶದಿಂದ ಇವುಗಳನ್ನು ಕರ್ನಾಟಕದಲ್ಲೇ ಬೃಹತ್ತಾದ ನಿಲುವುಗಲ್ಲು (Menhir)ಗಳೆಂದು ಹೇಳಬಹುದಾಗಿದೆ. ಇನ್ನು ಮುಂದೆ ಬೃಹತ್ ಶಿಲಾಯುಗದ ನೆಲೆಗಳ ನಕ್ಷೆಯಲ್ಲಿ ನಿಲುವುಗಲ್ಲುಗಳು ದೊರೆತ ಸ್ಥಳವೆಂದು ತುಮಕೂರು ಜಿಲ್ಲೆಯೂ ನಮೂದಾಗಬೇಕಾಗುತ್ತದೆ.

–o–

2. ಡಾ॥ ಅ. ಸುಂದರ. Early chamber Tombs of South India. ಪುಟ–146

# ವ್ಯಾಕರಣಾಂಶ ಸಮೀಕ್ಷೆ : ೧ ಮತ್ತು ೨

**ಟಿ. ಕೇಶವಭಟ್ಟ**

## ೧. ವಕಾರಾಗಮಭ್ರಮೆ

ಕನ್ನಡದಲ್ಲಿ ವ್ಯಾಕರಣಶಾಸ್ತ್ರರಚನೆ ಬಲುಮಟ್ಟಿಗೆ ಸಂಸ್ಕೃತದ ಅನುಕರಣೆ, ನಿಜ. ಆದರೆ, ಹಲವು ವಿಷಯಗಳಲ್ಲಿ ಇದು ಸಂಸ್ಕೃತಕ್ಕಿಂತ ಬೇರೆಯಾಗಿ ವೈಶಿಷ್ಟ್ಯಪೂರ್ಣವಾಗಿದೆಯಲ್ಲದೆ, ಕನ್ನಡದ ಅತಿಶಯವನ್ನು ಎತ್ತಿ ತೋರಿಸುವಂತಿರುವುದೂ ಲಕ್ಷ್ಯಾರ್ಹ. ಅಂಥವುಗಳಲ್ಲಿ ಕನ್ನಡದ ಸಂಧಿವಿಚಾರವೂ ಒಂದು. ಕನ್ನಡದಲ್ಲಿ ವಿಸರ್ಗಸಂಧಿಯಿಲ್ಲ. ಸಂಧಿಕಾರ್ಯವುಳ್ಳ ವ್ಯಂಜನಸಂಧಿಯೆಂದರೆ, ಆದೇಶವೊಂದೇ. ಸಂಸ್ಕೃತದಂತೆ ಶ್ಚುತ್ವ, ಷ್ಟುತ್ವ, ಜಶ್ತ್ವ ಮುಂತಾದುವಿಲ್ಲ. ಸ್ವರ ಸಂಧಿಯಾಗಿ ಸವರ್ಣದೀರ್ಘ, ಗುಣ, ವೃದ್ಧಿ, ಯಣ್ ಮುಂತಾದುವಿಲ್ಲ. ಕನ್ನಡದಲ್ಲಿ ಸ್ವರಕ್ಕೆ ಸ್ವರ ಸೇರಿದಾಗ ಪೂರ್ವಸ್ವರ ಲೋಪವಾಗುವುದು. ಆಗ ನಾಮಹಾನಿಯಾಗುವುದಾದರೆ, ಅಲ್ಲಿ ಯಕಾರಾಗಮ ವಕಾರಾಗಮ ಆಗುತ್ತವೆ. ಸಂಧಿಗಳೆಂದರೆ, ಇವೇ. ಸಂಧಿಯಾಗದೆ ಇರತಕ್ಕ ಪ್ರಕೃತಿ ಭಾವವೂ ಇರುತ್ತದೆ. ಆಗಮಸಂಧಿಯಲ್ಲಿ ಇನ್ನೂ ಕೆಲವಿದೆ. ಅವು ವಿಭಕ್ತಿಪ್ರತ್ಯಯ ಸೇರುವಾಗ ಪರಿಣಮಿಸುವವು :– ನ, ಮ, ಇನ, ದ, ಅರ್ - ಎಂಬಿವು. ಉದಾ :

**ನ, ಮ ಆಗಮ** : ಪರದೊಳ್ ಸ್ವರಮಿರೆ ಬಿಂದುಗೆ
ದೊರೆಕೊಳ್ಗುಂ ನತ್ವ ಮತ್ವಮಾ ಮತ್ವಕ್ಕು
ಚ್ಚರಿಪರ್ ವತ್ವಮನರೆಬರ್
ನಿರವದ್ಯಂ ನಿಜಮಕಾರದೆಡೆಗಂ ವತ್ವಂ

(ಶ.ದ. ಸೂ. 114)

ಉದಾ : ರಾಮಂ + ಇವಂ—ರಾಮ + ನ್ + ಇವಂ = ರಾಮನಿವಂ
ವೃಕ್ಷಂ + ಇದು—ವೃಕ್ಷ + ಮ್ + ಇದು = ವೃಕ್ಷಮಿದು (ವೃಕ್ಷವಿದು)

ಈ ಉದಾಹರಣೆಗಳಲ್ಲಿ ಬಿಂದುವಿನ ಸ್ಥಾನದಲ್ಲಿ ನ್, ಮ್‌ಗಳು ಬಂದಿರುವುದರಿಂದ ಅವೆರಡೂ ಆಗಮವೆನಿಸುವುದಿಲ್ಲ ; ಆದೇಶವೆನಿಸುತ್ತವೆಯಾದರೂ ಅವೆರಡನ್ನು ಆಗಮವೆಂದು ಕರೆಯಲಾಗಿದೆ; ಏಕೆಂದರೆ, ಅವು ಅನುಸ್ವಾರದ ಉದಾಹರಣೆಗಳು. ಅನಂತರ, ವೃಕ್ಷಮಿದು ಎಂಬುದು ವೃಕ್ಷವಿದು ಎಂದಾಗುವುದು. ಆಗ ಮಕಾರಕ್ಕೆ ವಕಾರ ಆದೇಶವಾಗುತ್ತದೆ. ಆದುದರಿಂದ ಇದು ವಕಾರಾಗಮವಲ್ಲ.

**ಇನ ಆಗಮ :** ನಾಡು + ಇಂ = ನಾಡಿಂ (ಇಲ್ಲಿ ಇನಾಗಮವಿಲ್ಲ),
ನಾಡು + ಇನ್ + ಇಂ = ನಾಡಿನಿಂ (ಇಲ್ಲಿ ಇದೆ)

ಉಕಾರಾಂತ, ಋಕಾರಾಂತ, ಎಕಾರಾಂತ (ಕೆಲವೆಡೆ ಮಾತ್ರ) ನಾಮವಾಚಿಗೆ ತೃತೀಯೆ, ಪಂಚಮಿ, ಷಷ್ಠಿ, ಸಪ್ತಮೀ ವಿಭಕ್ತಿಗಳಲ್ಲಿ ಇನಾಗಮವಿರುತ್ತದೆ. - ಹಾಡಿನಿಂ ಪಿತೃವಿನ, ಕೆಳಗಿನ–ಇತ್ಯಾದಿ.

**ದಕಾರಾಗಮ :** ಅಕಾರಾಂತ ನಪುಂಸಕಲಿಂಗ ಏಕವಚನದಲ್ಲಿ ತೃತೀಯ, ಪಂಚಮಿ, ಷಷ್ಠಿ, ಸಪ್ತಮೀ ವಿಭಕ್ತಿಗಳಲ್ಲಿ ದಕಾರಾಗಮವಾಗುತ್ತದೆ. ಇದು ಶಬ್ದದ ಪ್ರಕೃತಿ ರೂಪಕ್ಕೆ ಹತ್ತುವುದು (ಪುಲ್ಲಿಂಗದಲ್ಲಾದರೆ, ಪ್ರಥಮಾ ವಿಭಕ್ತಿಯ ಮೇಲೆ ಹತ್ತುವುದು). ಉದಾ : ಮರದಿಂ, ಮರದ, ಮರದಲ್ಲಿ.

**ಅರ್ ಆಗಮ :** ತು, ದು ಕೊನೆಯಾಗಿರುವ ಕೃತ್ತು, ಗುಣವಾಚಿ, ಸರ್ವನಾಮ, ಸಂಖ್ಯಾ, ಪ್ರಮಾಣವಾಚಿಗಳಿಗೆ ಏಕವಚನದಲ್ಲಿ ತೃತೀಯೆ ಮತ್ತು ಅದರ ಮುಂದಿನ ವಿಭಕ್ತಿಪ್ರತ್ಯಯ ಸೇರುವಾಗ ಅರ್ ಆಗಮವಾಗುವುದು. (ಶ.ದ.ಸೂ. 120) ಉದಾ : ಆದುದರಿಂ, ಅದರಿಂ, ಅದರ, ಒಳ್ಳೆಯದರ ಇತ್ಯಾದಿ. ಹಳಗನ್ನಡ ಹೊಸಗನ್ನಡ ಗಳೆರಡರಲ್ಲಿಯೂ ಅರಾಗಮವಿದೆ.

**ವಕಾರಾಗಮ :** ಕನ್ನಡದ ವ್ಯಾಕರಣಗ್ರಂಥಗಳಾಗಿರುವ ಭಾಷಾಭೂಷಣ, (ಸೂತ್ರ 24), ಶಬ್ದಸ್ಮೃತ್ಯಧಿಕರಣ (ಸೂತ್ರ 9), ಶಬ್ದಾನುಶಾಸನ (ಸೂ. 37, 38) ಇವುಗಳಲ್ಲಿ ವಕಾರಾಗಮಕ್ಕೆ ಲಕ್ಷಣೋದಾಹರಣಗಳಿವೆ. ಶಬ್ದಮಣಿದರ್ಪಣದಲ್ಲಿ ಉವರ್ಣ, ಋವರ್ಣ, ಓತ್ವ, ಔತ್ವಗಳಿಗೆ ಸ್ವರ ಪರವಾದರೆ ವಕಾರಾಗಮವಾಗುವುದೆಂದು ಹೇಳಿ, ಉದಾಹರಣೆಗಳನ್ನು ಕೊಡಲಾಗಿದೆ. **ಆಕಾರಾಂತ ನಾಮಪ್ರಕೃತಿಗೆ ಸ್ವರ ಪರ ವಾದರೆ ವಕಾರಾಗಮವಾಗುವುದೆಂದು ಈ ವ್ಯಾಕರಣಗ್ರಂಥಗಳಲ್ಲಿ ಯಾವು ದರಲ್ಲಿಯೂ ಹೇಳಿಲ್ಲ.** ಕನ್ನಡ ಕೈಪಿಡಿ; ತೀ. ನಂ. ಶ್ರೀಯವರ ಮಧ್ಯಮವ್ಯಾಕರಣ, ನನ್ನ ಭಾಷಾದೀಪಿಕೆ (1956, 1993) ಈ ವಕಾರಾಗಮ ವಿಷಯದಲ್ಲಿ ಒಮ್ಮತದವು.

ಆದರೆ, ಈಚೆಗೆ ಪ್ರಕಟವಾಗಿ ನನ್ನ ಲಕ್ಷ್ಯಕ್ಕೆ ಬಂದ ಮೂರು ವ್ಯಾಕರಣ ಪುಸ್ತಕಗಳುಹೊಸತೊಂದು ವಕಾರಾಗಮಲಕ್ಷಣವನ್ನು ಸಂಶೋಧಿಸಿವೆ! ಇದು ಸರಿಯೆ? ಎಂಬುದನ್ನು ಪರಿಶೀಲಿಸುವುದು ಅವಶ್ಯ. ಆ ಪುಸ್ತಕಗಳಿವು.

1. ಮೈಸೂರು ಸರ್ಕಾರದ ಪಠ್ಯಪುಸ್ತಕಗಳ ಇಲಾಖೆ (ವಿದ್ಯಾಸಂಶೋಧನ ಶಾಖೆ) 8, 9 ಮತ್ತು 10ನೆಯ ತರಗತಿಗಳಿಗೆ ಒದಗಿಸಿರುವ 'ಕನ್ನಡ ವ್ಯಾಕರಣ ದರ್ಪಣ' (1970), ಪುಟ : 19ರಲ್ಲಿ ಹೀಗೆ ಹೇಳಿದೆ : ಅಕಾರದ ಮುಂದೆ ಅಕಾರವೇ ಬಂದರೆ 'ವ' ಕಾರಾಗಮವಾಗುವುದು. ಉದಾ : ಹೊಲ + ಅನ್ನು — ಹೊಲ + ವ್ + ಅನ್ನು – ಹೊಲವನ್ನು. ಇದರಂತೆ ನೆಲವನ್ನು ಕುಲವನ್ನು, ತಿಲವನ್ನು, ಮನವನ್ನು.

2. ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ವರ್ಷದ ಪ್ರಕಟನೆಯ 'ಹೊಸಗನ್ನಡ ವ್ಯಾಕರಣ' (1977), ಪುಟ : 10ರಲ್ಲಿ ಹೀಗಿದೆ : ಪ್ರಾತಿಪದಿಕದ

ಅಕಾರಕ್ಕೆ ಸ್ವರ ಪರವಾದರೆ ನಡುವೆ ವಕಾರಗಮ ಬರುವುದು. ಉದಾ: ನೆಲ + ಅನ್ನು =ನೆಲವನ್ನು. ಇದರಂತೆ, ಧನವೇಕೆ, ಕುಲವೇನು, ಹೊಲವಿದು. ಪ್ರತ್ಯಯದ ಅಕಾರವಾದಲ್ಲಿ ಅದಕ್ಕೆ ಲೋಪ ಬರುತ್ತದೆ. ಉದಾ: ನಮ್ಮ+ಅರಸ=ನಮ್ಮರಸ. ಅವನ+ಇಚ್ಛೆ=ಅವನಿಚ್ಛೆ.

3. ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನದ ಪ್ರಕಟನೆಯು 'ಹೊಸಗನ್ನಡದ ವ್ಯಾಕರಣ' (1990), ಪುಟ: 37ರಲ್ಲಿ ಇಂತಿದೆ: — ಸಂಸ್ಕೃತ ಕನ್ನಡ ಶಬ್ದಗಳಲ್ಲಿ ಅಕಾರಕ್ಕೆ ಅಕಾರ ಬಂದರೆ. ವಕಾರದ ಆಗಮವುಂಟು. (ಕುಲ + ಅನ್ನು = ಕುಲವನ್ನು, ಸಾಲ+ಅನ್ನು=ಸಾಲವನ್ನು.)

ಇದೇಕೆ ವಕಾರಾಗಮವಲ್ಲವೆಂಬುದನ್ನು ಈಗ ನೋಡೋಣ: ಅಕಾರಾಂತ ನಪುಂಸಕಲಿಂಗದ ನಾಮ ಪ್ರಾತಿಪದಿಕಗಳಿಗೆ 'ಅಂ' ಅಥವಾ ಹೊಸಗನ್ನಡದ 'ಅನ್ನು' ಎಂಬ ಪ್ರತ್ಯಯ ಸೇರುವಾಗ, ಆಯಾ ಪ್ರಾತಿಪದಿಕಕ್ಕೆ ಬಿಂದುರೂಪದ ಪ್ರಥಮಾವಿಭಕ್ತಿಯ ಪ್ರತ್ಯಯ ಮೊದಲೇ ಇರುತ್ತದೆ. ಹಳಗನ್ನಡದ ಅಕಾರಾಂತ ನಾಮವಾಚಿಗಳಿಗೆಲ್ಲ ಬಿಂದುವೇ ಪ್ರಥಮಾವಿಭಕ್ತಿ. ಹೊಸಗನ್ನಡದಲ್ಲಿ ಅದಕ್ಕೆ ಲೋಪವಿದ್ದರೂ ದ್ವಿತೀಯಾ ವಿಭಕ್ತಿ ಸೇರುವಾಗ ಲೋಪವಿರುವುದಿಲ್ಲ. ನಪುಂಸಕಲಿಂಗದಲ್ಲಿ ತೃತೀಯ ಮತ್ತು ಮುಂದಿನ ವಿಭಕ್ತಿಪ್ರತ್ಯಯ ಸೇರುವಾಗಲೆಲ್ಲ ಪ್ರಥಮೆ ಇರುವುದಿಲ್ಲ. ಅಚ್ಚಗನ್ನಡದ ಶಬ್ದಗಳಿಗೆ ಪುಲ್ಲಿಂಗದಂತೆ ನೆಲಂ, ನೆಲನಂ. ಎಂಬ ರೂಪಗಳೂ ವಿಕಲ್ಪವಾಗಿ ಪ್ರಯೋಗದಲ್ಲಿವೆ. ಕುಲ + ಅಂ = ಕುಲಮಂ ಎಂದಾಗುವಾಗ, ಹಿಂದೆ ಉದಾಹೃತವಾದ ಸೂತ್ರದಂತೆ 'ಅಮುತ್ವಕ್ಕೆ ಉಚ್ಚರಿಪರ್ ವತ್ವಮಂ' ಎಂಬ ನಿಯಮದಂತೆ, ನೆಲವನ್ನು. ಕುಲವನ್ನು ಎಂಬುದಾಗಿ ವಕಾರವು ಆದೇಶವಾಗಿ ಬಂದಿರುತ್ತದೆ. ಇದನ್ನು 'ವಕಾರಾದೇಶ' ಎನ್ನಬೇಕಲ್ಲದೆ ವಕಾರಾಗಮ ಎನ್ನಬಾರದು. 'ಸ್ಥಾನಿವದಾದೇಶ: 'ಶತ್ರುವದಾದೇಶ:' 'ಅರಿಯವೋಲಾದೇಶಂ' ಎಂಬ ಸೂತ್ರಗಳ ಲಕ್ಷಣದಂತೆ. ಹೊಸತಾಗಿ ಬಂದ ಅಕ್ಷರವು ಮೊದಲಿದ್ದ ಅಕ್ಷರವನ್ನು ಅಳಿಸಿ ಅಥವಾ ಉಚ್ಚಾಟಿಸಿ, ಅದರ ಸ್ಥಾನದಲ್ಲಿ ಕಾಣಿಸಿಕೊಳ್ಳುವುದು ಆದೇಶವೆನಿಸುವುದಲ್ಲದೆ ಆಗಮವೆನಿಸಲಾರದು.

ಆದುದರಿಂದ, ಮನಂ + ಆಯ್ತು = ಮನವಾಯ್ತು (ಮನವಾಯ್ತು). ಮನಂ + ಇಲ್ಲ=ಮನಮಿಲ್ಲ (ಮನವಿಲ್ಲ) ಈ ಎರಡು ರೂಪಗಳಲ್ಲಿ ಮೊದಲನೆಯದರಲ್ಲಿ ಬಿಂದುವಿಗೆ ಸ್ವರ ಸೇರಿದಾಗ ಮಕಾರವಾಗಿದೆ; ಆ ಮಕಾರಕ್ಕೆ ವಕಾರದ ಉಚ್ಚಾರಣೆ ಬಂದು. ಅಂದರೆ ವಕಾರ ಆದೇಶವಾಗಿ ಎರಡನೆಯ ರೂಪವಾಗಿದೆ. ಗುರು + ಅನ್ನು = ಗುರುವನ್ನು ಎಂಬಲ್ಲಿ ವಕಾರಾಗಮವೆಂಬುದು ಸರಿಯಾದುದು. ಆದರೆ ಕುಲ + ಅನ್ನು = ಕುಲವನ್ನು ಎಂದಾಗುವಂತೆ ಮನುಷ್ಯ + ಅನ್ನು—ಎಂಬುದು ಮನುಷ್ಯವನ್ನು ಎಂದಾಗದು; ಅದು ಮನುಷ್ಯಂ+ಅನ್ನು = ಮನುಷ್ಯ + ನ್ + ಅನ್ನು = ಮನುಷ್ಯನನ್ನು ಎಂದಾಗುವುದೆಂದು ವ್ಯಾಕರಣ ವಿದ್ಯಾರ್ಥಿಗಳು ಅರಿತಿರಬೇಕಾಗುತ್ತದೆ. □

## ೨. ತನ್ನ, ತಮ್ಮ ವಿಚಾರ

ಕನ್ನಡದ ಸರ್ವನಾಮಗಳಲ್ಲಿ 'ತಾನು' ಪ್ರಥಮಪುರುಷವೆಂದು ವ್ಯಾಕರಣ ಶಾಸ್ತ್ರಗಳಲ್ಲಿ ಹೇಳಲಾಗಿದೆ. ಆದರೆ, ಅವನು, ಅವಳು, ಅದು ಎಂಬವು ಪ್ರಥಮಪುರುಷ ವಾಗುವುದರಿಂದ ಪ್ರಚಲಿತವಾಗಿ 'ತಾನು' ಎಂಬುದು ಆತ್ಮಾರ್ಥಕ ಸರ್ವನಾಮ (Reflective Pronoun) ಏಕವಚನವಾಗಿರುತ್ತದೆ. ಅದರ ಬಹುವಚನ ರೂಪ 'ತಾವು'. ಆದರೆ, ಇದು ಮಧ್ಯಮಪುರುಷದಲ್ಲಿ ಆದರಾರ್ಥಕ ಬಹುವಚನವೂ ಆಗಿರುತ್ತದೆ. ಮೂರು ಪುರುಷಗಳಲ್ಲಿಯೂ ಪ್ರಯೋಗಕ್ಕೆ ಬರುವುದರಿಂದ ಆತ್ಮಾರ್ಥಕ ವೆನಿಸುವುದು. ತಾನು ಮತ್ತು ತಾವು ಎಂಬ ಇವೆರಡರ ಷಷ್ಠೀವಿಭಕ್ತಿರೂಪಗಳು 'ತನ್ನ' ಮತ್ತು 'ತಮ್ಮ' ಎಂಬುದು ಸಾಮಾನ್ಯರೂ ತಿಳಿದಿರುವ ಸಂಗತಿ.

ಆದರೆ, ಇವುಗಳ ಪ್ರಯೋಗದಲ್ಲಿ ಅನೇಕ ವಿದ್ವಾಂಸರು ಹಳಿತಪ್ಪಿರುವುದು ಕಾಣಿಸುವುದರಿಂದ ಅದನ್ನಿಲ್ಲಿ ವಿವೇಚನೆಗೆ ಎತ್ತಿಕೊಳ್ಳಲಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಸರ್ವನಾಮವೆಂದರೇನೆಂಬ ಸ್ಪಷ್ಟೀಕರಣ ಅವಶ್ಯವೆನಿಸುತ್ತದೆ:- ಸರ್ವನಾಮವು ನಾಮಪ್ರತಿನಿಧಿ ಶಬ್ದ. ನಾಮವಾಚಿಗಿರುವ ನೆಲೆ ಬೆಲೆಯೆಲ್ಲವೂ ಅದರ ಸರ್ವನಾಮಕ್ಕಿದೆ. ಅದು ಪ್ರತಿನಿಧಿಸುವ ನಾಮದ ಸರ್ವವನ್ನೂ (ಲಿಂಗ, ವಚನ, ಪುರುಷ, ವಿಭಕ್ತಿಗಳನ್ನು) ವಹಿಸುವುದರಿಂದಲೇ ಅದರ ಸಾರ್ಥಕ್ಯವಿರುತ್ತದೆ. ಇಂಗ್ಲಿಷ್ ವ್ಯಾಕರಣಸೂತ್ರದಲ್ಲಿ ಹೇಳಿರುವುದು ಹೀಗೆ: Since a pronoun is used instead of a noun, it must be of the same gender and person as the noun it stands for[1]

ಆತ್ಮಾರ್ಥಕ ಸರ್ವನಾಮವಾಗಿರುವುದರಿಂದ ತಾನು ಮತ್ತು ತಾವು ಇವು ಮತ್ತು ಇವುಗಳ ವಿಭಕ್ತಿರೂಪಗಳು ಮೂರು ಪುರುಷಗಳಿಗೂ ಅನ್ವಯಿಸಬೇಕಾದುವು. ಆದರೆ, ಕನ್ನಡದಲ್ಲಿ ಉತ್ತಮ ಮಧ್ಯಮ ಪುರುಷಗಳಲ್ಲಿ ಅವುಗಳ ಸಹಜಪ್ರಯೋಗವಿಲ್ಲ. : 'ನಾನು ತನ್ನ ಮನೆಗೆ ಹೋಗುತ್ತೇನೆ, ನೀನು ತನ್ನ ಕೆಲಸ ನೋಡು' ಎನ್ನುವುದಿಲ್ಲ. 'ನಾನು ನನ್ನ' ಎಂತಲೂ 'ನೀನು ನಿನ್ನ' ಎಂತಲೂ ಪ್ರಯೋಗಿಸುವುದೇ ರೂಢಿ. ಇದರ ಬಹು ವಚನದಲ್ಲಿಯೂ ಹಾಗೆಯೇ. ಆದರೆ. ಪ್ರಥಮಪುರುಷದಲ್ಲಿ ಆತ್ಮಾರ್ಥಕ ಸರ್ವನಾಮದ ಬಳಕೆ ಇದ್ದೇ ಇರುತ್ತದೆ. ತಾನು, ತನ್ನನ್ನು, ತನ್ನಿಂದ, ತನಗೆ. ತನ್ನ. ತನ್ನಲ್ಲಿ ಎಂಬ ಪ್ರಯೋಗಗಳಿರುತ್ತವೆ. ಬಹುವಚನವಾಗಿ – ತಾವು, ತಮ್ಮನ್ನು, ತಮ್ಮಿಂದ, ತಮಗೆ, ತಮ್ಮ, ತಮ್ಮಲ್ಲಿ ಎಂಬ ರೂಪಗಳೂ ನೆಲೆವಡೆದಿವೆ. ಇವನ್ನು ಕ್ರಮವರಿತು ಹೆಚ್ಚಿನ ವಿದ್ವಾಂಸರು ಪ್ರಯೋಗಿಸುವರಾದರೂ, ವಿದ್ವಾಂಸರೇ ಕೆಲವೆಡೆ 'ತನ್ನ' ಎಂಬ ಏಕ

---

1. J. C. Nesfield's English Grammar, composition and usage 1960, p. 35

ವಚನವನ್ನೇ ಬಹುವಚನದ ಸ್ಥಾನದಲ್ಲಿ ಪ್ರಯೋಗಿಸುವುದು ಕಂಡು ಬಂದಿದೆ. ಅದು ಹೇಗೆ ಸರಿ? ಎಂಬುದಿಲ್ಲಿ ವಿಚಾರಾರ್ಹವಾಗಿದೆ.

ಬಹುಸಂಖ್ಯಾವಾಚಿಯಾಗಿ ಬಹುವಚನವಿರುವಂತೆ, ಆದರಾರ್ಥಕ ಬಹುವಚನವೂ ಇರುತ್ತದೆ– (Honourific Plural). ಮುಖ್ಯವಾಗಿ ಹಿರಿಯರನ್ನು, ಗುರುಗಳನ್ನು, ಸ್ವಾಮಿಗಳನ್ನು, ಗೌರವಾರ್ಹರನ್ನು ಕುರಿತು ಹೇಳುವಾಗ ತಾವು, ತಮ್ಮನ್ನು, ತಮ್ಮಿಂದ, ತಮಗೆ, ತಮ್ಮ, ತಮ್ಮಲ್ಲಿ ಎಂಬ ಸರ್ವನಾಮ ಬಹುವಚನಗಳನ್ನು ಬಳಸುವುದು ಶಿಷ್ಟಾಚಾರವಾಗಿರುತ್ತದೆ. ಆದರೆ ಇದರ ಉಲ್ಲಂಘನೆ ಅನೇಕ ಮುದ್ರಿತ ಪುಸ್ತಕಗಳಲ್ಲಿ ಕಾಣಿಸುತ್ತಿದೆಯಲ್ಲದೆ, ಪತ್ರಿಕೆಗಳಲ್ಲಿ ನಿರಂತರ ನಡೆಯುತ್ತಲೇ ಇರುವುದು ಕಂಡು ಬರುತ್ತಿದೆ. ಕೆಲವು ಉದಾಹರಣೆಗಳಿವು :

1. ನಿರಂಜನರು ಕನ್ನಡ ಸಾಹಿತ್ಯದಲ್ಲಿ **ತನ್ನದೇ** ಆದ ಶೈಲಿಯೊಂದನ್ನು ನಿರ್ಮಿಸಿದ್ದಾರೆ (ಕಯ್ಯಾರ ಕಿಞ್ಞಣ್ಣ ರೈ : ನಿರಂಜನ ಅಭಿನಂದನ, 1986, ಪುಟ: 19, 'ಧೀರಚೇತನ' ಎಂಬ ಲೇಖನದಲ್ಲಿ)

2. ಇವರು (ವಾದಿರಾಜರು) **ತನ್ನ** ತಾಯಿ ಹೇಳಿದ ಹರಕೆಯಂತೆ, ಹರಿಗೆ ಲಕ್ಷಾಲಂಕಾರವನ್ನು ಒಪ್ಪಿಸುವಂತೆ, ವ್ಯಾಸಭಾರತದ ಲಕ್ಷಶಬ್ದಗಳ ವಿಶೇಷಾರ್ಥದ ಕೃತಿಯನ್ನು ಸಂಸ್ಕೃತದಲ್ಲಿ ರಚಿಸಿದರು. (ಕೆ. ವೆಂಕಟರಾಯಾಚಾರ್ಯ : ಸಾಹಿತ್ಯ ಸಮುಚ್ಚಯ, ಪುಟ : 10)

3. ಕಾರ್ಕಳದಲ್ಲಿ ಒಂದು ಕೆರೆಯನ್ನು ಮುಚ್ಚಿಬಿಡಲು ತೀರ್ಮಾನಿಸಿದಾಗ, ಡಾ. ಶಿವರಾಮ ಕಾರಂತರು **ತನ್ನ** ಪ್ರತಿಭಟನೆ ಕಳಿಸಿ ಅದನ್ನು ತಪ್ಪಿಸಿದ್ದರು. (ತರಂಗ ಪತ್ರಿಕೆ, ಸಂಪಾದಕೀಯ, 19–3–1987)

4. ಅಮೃತಾ ಪ್ರೀತಂ **ತನ್ನ** ಕಾವ್ಯರಚನೆಯ ವಸ್ತುಗಳನ್ನು **ತನ್ನ** ಮನದಾಳದ ನೋವಿನಿಂದಲೇ ಜೀವೋತ್ಪತ್ತಿ ಮಾಡಿದವರು. (ಮಲ್ಲೇಪುರಂ ವೆಂಕಟೇಶ್ : ಕನ್ನಡಪ್ರಭ 8–2–1987, ಇದರಲ್ಲಿ 'ಸುನೇರಿ' ಎಂಬ ಪುಸ್ತಕದ ವಿಮರ್ಶೆ).

5. ಗೃಹಸ್ಥರು **ತಾನು** ಮಾಡಿದ ಅಡಿಗೆಯಲ್ಲಿ ಭೂತಗಳಿಗೂ ಪ್ರಾಣಿಗಳಿಗೂ ಭಾಗವನ್ನು ಕೊಡಬೇಕು (ಶ್ರೀ ನರಸಿಂಹ ಭೀಮಾಚಾರ್ಯ : 'ಆದರ್ಶ ಗೃಹಸ್ಥಾಶ್ರಮ' ಎಂಬ ಲೇಖನದಲ್ಲಿ–ಜೀವೋತ್ತಮ ಪತ್ರಿಕೆ, ಕುಮಟಾ, ಸಂಪುಟ : 28, ಸಂ. 1, 19.7.1985).

6. ಆದಿಪ್ರಾಸವನ್ನು ಕಾವ್ಯಪುರುಷನ ಕೊರಳಲ್ಲಿ ತೂಗುತ್ತಿದ್ದ ಜನಿವಾರ ಎಂದು ಸಮರ್ಥಿಸುತ್ತಿದ್ದ ಪಂಜೆಯವರು 1934ರಲ್ಲಿ **ತನ್ನ** ರಾಯಚೂರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷಭಾಷಣದಲ್ಲಿ ಪ್ರಾಸ ತಿರಸ್ಕರಣೆಯಿಂದ ಕನ್ನಡ ಶೈಲಿಗೆ ಸಹಜತೆ ಬಂದಿದೆ ಎಂಬುದನ್ನು ಒಪ್ಪಿಕೊಂಡರು. (ಮುರಳೀಧರ ಉಪಾಧ್ಯ : ಉಗ್ರಾಣ ಗ್ರಂಥದ ಆಲೋಕನದಲ್ಲಿ, ತರಂಗ : 3.4.1988.)

ಹೀಗೆ ಕೊಡಬಹುದಾದ ಉದಾಹರಣೆಗಳು ನೂರಾರಲ್ಲ, ಸಾವಿರಾರಿವೆ. ನಿತ್ಯವೂ ಈ ಪ್ರಯೋಗ ಆಗುತ್ತಲೇ ಇದೆ. ವಿರಳವಾಗಿ ಇತರ ಕಡೆಯು, ಆದರೆ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಕಡೆಯು, ಕೆಲವು ಮಂದಿ ವಿದ್ವಾಂಸರು ಅರಿತೋ ಅರಿಯದೆಯೋ ವಚನದೋಷದ ಈ ಬಗೆಯ ತಪ್ಪುಬಳಕೆ ಮಾಡುತ್ತಿದ್ದಾರೆ; **ತಮ್ಮ** ಎಂಬ ಬಹುವಚನ ಕನ್ನಡದಲ್ಲಿದ್ದರೂ **ತನ್ನ** ಎಂದೇ ಪ್ರಯೋಗಿಸುತ್ತಾರೆ. ಇದೇಕೆಂಬುದು ಶೋಧಿಸ ತಕ್ಕುದಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಕಡೆಯವನೇ ಆಗಿರುವ ಈ ಲೇಖಕನು ಅಭಿಪ್ರಾಯಪಟ್ಟಿರುವುದು ಹೀಗಿದೆ.

ತುಳುಭಾಷೆಯ ಪ್ರಭಾವದಿಂದ ಹೀಗಾಗಿದೆ. ತುಳುವಿನಲ್ಲಿ ಏಕವಚನದಲ್ಲಿಯೂ ಬಹುವಚನದಲ್ಲಿಯೂ **'ತನ್ನ'** ಎಂಬುದೇ ಪ್ರಯೋಗದಲ್ಲಿದೆ. ಉದಾಹರಣೆಗಳಿವು : "ಆರ್ **ತನ್ನ** ಕೈಟ್ಟ್ ಕೊಂಡತ್ತೆರ್" (ಅವರು **ತನ್ನ** ಕೈಯಲ್ಲಿ ತೆಗೆದುಕೊಂಡು ಬಂದರು). ಆಯೆ **ತನ್ನ** ತರೆಟ್ಟ್ ಪುಡೆ ತುಂಬೊಂದು ಬತ್ತೆ (ಅವನು **ತನ್ನ** ತಲೆಯಲ್ಲಿ ಹೊರೆ ಹೊತ್ತು ಕೊಂಡು ಬಂದನು.) ಜೋಯಿಸೆರ್ ಇತ್ತೆ **ತನ್ನ** ಇಲ್ಲಾಳಿತ್ತೆರ್. (ಜೋಯಿಸರು ಈಗ **ತನ್ನ** ಮನೆಯಲ್ಲಿದ್ದರು.) ಹೀಗೆ ತುಳುವಿನಲ್ಲಿ 'ತಮ್ಮ' ಎಂಬ ಬಹುವಚನವಿರಬೇಕಾದಲ್ಲಿ 'ತನ್ನ' ಎಂಬ ಏಕವಚನ ಪ್ರಯೋಗವಿರುವುದು ಕಂಡುಬರುವ ಸಂಗತಿ. ಅದರ ಪ್ರಭಾವದಿಂದ ಕನ್ನಡದಲ್ಲಿಯೂ ಹಾಗೆ ಆದುದೆಂದು ತೋರುತ್ತದೆ.

ಯಾವುದೇ ಭಾಷೆಯ ಶುದ್ಧತೆಯು ವ್ಯಾಕರಣಶುದ್ಧತೆಯನ್ನು ಅವಲಂಬಿಸಿರು ವುದರಿಂದ ಇದನ್ನು ಕನ್ನಡದಲ್ಲಿ ಅವರವರು ಯೋಚಿಸಿ, ತಿದ್ದಿಕೊಳ್ಳುವುದು ಸೂಕ್ತ ವಲ್ಲವೆ? ದ. ಕ. ಜಿಲ್ಲೆಯ ಕಡೆಯ ಪತ್ರಿಕೆಗಳಲ್ಲಿ, ಆ ಕಡೆಯ ಲೇಖಕರಲ್ಲಿ (ಈ ಲೇಖಕನ ಹೊರತು) ಹೆಚ್ಚಾಗಿ ಈ ತಪ್ಪು ಕಂಡುಬರುತ್ತದೆ. ಅದನ್ನು ಮಾಡುವವರು ಈ ಸಮೀಕ್ಷೆಯನ್ನು ಸಂಲಕ್ಷಿಸುವರೆಂದು ಭಾವಿಸುತ್ತೇನೆ.



# ಕಾವ್ಯಾರ್ಥಕುತೂಹಲ-ಪ್ರತಿಕ್ರಿಯೆಗಳ ಪುನಃಪರಿಶೀಲನೆ

**ಪ್ರೊ|ಗರ್ಗೇಶ್ವರಿ ವೆಂಕಟಸುಬ್ಬಯ್ಯ**

"ಕಾವ್ಯಾರ್ಥಕುತೂಹಲ" ಎಂಬ ಶ್ರೀಮಾನ್ ಪಿ. ವಿ. ಜೋಶಿಯವರ ಲೇಖನವನ್ನು [1] ನೋಡಿ ನಾನು ಬರೆದಿದ್ದ "ಕಾವ್ಯಾರ್ಥಕುತೂಹಲ-ಪ್ರತಿಕ್ರಿಯೆ" ಎಂಬ ಲೇಖನಕ್ಕೆ [2] ಉತ್ತರರೂಪವಾಗಿ ಜೋಶಿಯವರು "ಸಾಹಿತ್ಯ ಕುತೂಹಲ-ಪ್ರತಿಕ್ರಿಯೆಗೆ ಪ್ರತಿಕ್ರಿಯೆ" ಎಂಬ ಲೇಖನವನ್ನು [3] ಬರೆದಿದ್ದಾರೆ. ಅದರಲ್ಲಿ "ಪಂಡಿತ ಪ್ರಪಂಚದ ವಿಸ್ತಾರವೂ ನನಗೊಂದು ಕುತೂಹಲವೇ. ಆ ವಿಸ್ತಾರವನ್ನು ನೋಡಿ ಸುಖಿಸುವುದಕ್ಕೆ ಮತ್ತೆ ಪ್ರತಿವಾದಗಳನ್ನು ಮಂಡಿಸುತ್ತೇನೆ" ಎಂದಿದ್ದಾರೆ. ಹಾಗೆ ಸುಖಿಸಲು ಜೋಶಿಯವರು ಇನ್ನಿಲ್ಲವಲ್ಲ ಎಂದು ವ್ಯಸನವಾಗುತ್ತಿದೆ.

೧.

**ಆರು, ನಿಚುಲ, ಪನಸ.**

"ಪಂಪನ ಪದ್ಯವನ್ನು ಅರ್ಥಮಾಡುವಲ್ಲಿ ಪ್ರಸ್ತುತವಾದದ್ದು 'ನಿಚುಲ' ಪದದ ಅರ್ಥವಲ್ಲ. 'ಆರು' ಪದದ ಅರ್ಥ ಎಂದಿದ್ದಾರೆ" ಜೋಶಿಯವರು. ಮೂಲ ಲೇಖನದಲ್ಲಿ "ಆಱು" ಶಬ್ದಕ್ಕೆ ಒಂದು ಅರ್ಥ 'ನಿಚುಲವೃಕ್ಷ' ಎಂದು ಕಣ್ಣಿಗೆ ಬಿತ್ತು" ಎಂದು ಹೇಳಿ, ಮುಂದೆ "ಅಮರಕೋಶವು ನಿಚುಲ=ಪನಸ ಎನ್ನುತ್ತದೆ" ಎಂದು ಬರೆದಿದ್ದರು ಆದುದರಿಂದ 'ನಿಚುಲ' ಪದದ ಅರ್ಥ ಪ್ರಸ್ತುತವೇ. "ನಿಚುಲ"ವು "ಪನಸ"ವಲ್ಲ ಎಂದು ನನ್ನ ಹಿಂದಿನ ಲೇಖನದಲ್ಲಿಯೇ ವಿವರಿಸಿದ್ದೇನೆ. ಈಗ ಜೋಶಿಯವರು 'ಚುಲ್' ಧಾತುವಿನಿಂದ 'ನಿಚುಲ' ಶಬ್ದದ ರೂಪನಿಷ್ಪತ್ತಿಯ ವಿಷಯವನ್ನು ಪ್ರಸ್ತಾಪಿಸಿದ್ದಾರೆ.

ಪಾಣಿನೀಯ ಧಾತುಪಾಠದಲ್ಲಿ "ಚುಲ ಸಮುಚ್ಛ್ರಾಯೇ" ಎಂದಿದೆ. ಸಮುಚ್ಛ್ರಾಯ ಎಂದರೆ ಮೇಲೇರುವುದು ಅಥವಾ ಮೇಲಕ್ಕೆ ಏರಿಸುವುದು. ಆಪ್ಟೆಯವರ ಕೋಶದಲ್ಲಿ ಈ ಧಾತುವಿಗೆ To raise or elevate, To rise, increase, "To dip, dive, or plunge into (ಮೇಲೇರಿಸು. ಏಳು, ಹೆಚ್ಚು, ಅದ್ದು. ಒಳಗೆ ಮುಳುಗು) ಎಂಬ ಅರ್ಥಗಳನ್ನು ಹೇಳಿದೆ. ಜೋಶಿಯವರು

---

1. ಕರ್ನಾಟಕ ಲೋಚನ. ಜೂನ್ 1993ರ ಸಂಚಿಕೆ; ಪುಟಗಳು 40–44
2. ಅದೇ, ಡಿಸೆಂಬರ್ 1993ರ ಸಂಚಿಕೆ; ಪುಟಗಳು 72–78
3. ಅದೇ, ಜೂನ್ 1994ರ ಸಂಚಿಕೆ; ಪುಟಗಳು 47, 48.

ಬರೆದಿರುವಂತೆ "ಮುಂದೆ ಸರಿಸು, ಧರಿಸು, ಹುಟ್ಟಿಸು" ಎಂಬ ಅರ್ಥಗಳು ಈ ಕೋಶದಲ್ಲೇ ಆಗಲಿ, ಬೇರೆ ಕೋಶಗಳಲ್ಲಾಗಲೀ ಕಂಡು ಬರುವುದಿಲ್ಲ. 'ನಿ' ಎಂಬ ಉಪಸರ್ಗ ಸಹಿತವಾದ 'ಚುಲ್' ಧಾತುವಿನಿಂದ 'ನಿಚುಲ' ಪದದ ನಿಷ್ಪತ್ತಿಯಾಗಿದೆ. ಕ್ಷೀರಸ್ವಾಮಿಯು, ಅಮರಕೋಶದ ವ್ಯಾಖ್ಯಾನದಲ್ಲಿ "ನಿಚೋಲ್ಯತೇ ಅಂಬುನಾ" (ನೀರಿನಿಂದ ಅಭಿವೃದ್ಧಿಪಡಿಸಲ್ಪಡುತ್ತದೆ) ಎಂಬ ವ್ಯುತ್ಪತ್ತಿಯನ್ನು ಕೊಟ್ಟಿದ್ದಾನೆ. ರಾಯಮುಕುಟನು ತನ್ನ ಪದಚಂದ್ರಿಕಾ ವ್ಯಾಖ್ಯಾನದಲ್ಲಿ "ಈ ಎರಡು ವ್ಯುತ್ಪತ್ತಿಗಳನ್ನು ಕೊಟ್ಟಿದ್ದಾನೆ.

1) ನಿಚುಲ್ಯತೇ ಸಮುಚ್ಛ್ರಿಯತೇ (ವರ್ಧಿಸಲ್ಪಡುತ್ತದೆ) ;
2) ನಿಚಿನೋತಿ ಪತ್ರಶಾಖಾದಿ ಸಂಚಯಂಕರೋತಿ (ಎಲೆ, ರೆಂಬೆ ಇತ್ಯಾದಿಗಳನ್ನು ಬೆಳೆಸಿಕೊಳ್ಳುತ್ತದೆ.

ಈ ವ್ಯುತ್ಪತ್ತಿಗಳಂತೆ ನಿಚುಲ ಶಬ್ದವು ಎಲ್ಲ ಗಿಡಗಳಿಗೂ ಅನ್ವಯಿಸುತ್ತದೆಯಾದರೂ ನನ್ನ ಹಿಂದಿನ ಲೇಖನದಲ್ಲಿ ವಿವರಿಸಿರುವಂತೆ, "ನಿಚುಲ" ಶಬ್ದವು ಕೆಲವು ಗಿಡಗಳ ಹೆಸರಿಗೆ ಮಾತ್ರ ಸೀಮಿತವಾಗಿದೆ. ಅವುಗಳಲ್ಲಿ ಹಲಸು ಸೇರಿಲ್ಲ.

ಶಬ್ದಗಳನ್ನು ಅಪ್ರಸಿದ್ಧಾರ್ಥದಲ್ಲಿ, ಕುಚೋದ್ಯಕ್ಕಾಗಲೀ ಶ್ಲೇಷೋಕ್ತಿಯಲ್ಲಾಗಲೀ ಪ್ರಯೋಗಿಸುತ್ತಾರೆ. ಬೇರೆ ಕಡೆಗಳಲ್ಲಿ ಇಂತಹ ಪ್ರಯೋಗವು ದೋಷವೆಂದು ಪರಿಗಣಿಸಲ್ಪಟ್ಟಿದೆ. ಅಂತಹ ಪ್ರಯೋಗದಿಂದ ಅಪಾರ್ಥವೂ ಆಗಬಹುದು.[4]

"ಹಲಸಿನ ಮರದ ಎಲೆಗಳೂ ಆಲದ ಮರದ ಎಲೆಗಳಂತೆಯೇ ಇರುವವಲ್ಲ ! ಆಲದ ಮರಕ್ಕಿರುವಂತೆ ಹಲಸಿನಮರಕ್ಕೂ ಹಾಲು ಇದೆಯಲ್ಲ! ಆದ್ದರಿಂದ ಒಂದು ಆರ ಒಂದು ಆಲ ಏಕಾಗಿರಬಾರದು?" ಎಂದು ಪ್ರಶ್ನಿಸಿದ್ದಾರೆ ಈ ಲೇಖನದಲ್ಲಿ. ಈ ರೀತಿಯ ಅರ್ಥಕಲ್ಪನೆಗಳ ಬಗೆಗೆ ಟೀಕೆ ಅನಗತ್ಯ.

---

4. ಕೆಲವು ಉದಾಹರಣೆಗಳು :-

(i) 'ಕೇಸರೀ' ಎಂಬ ಪದಕ್ಕೆ ಸಿಂಹ, (ಕನ್ನಡದಲ್ಲಿ) ಕುಂಕುಮ ಕೇಸರಿ (ಸುಗಂಧದ್ರವ್ಯ) ಎಂಬ ಅರ್ಥಗಳಿವೆ. ಕೈಲಾಸಂರವರು ತಮ್ಮ ನಾಟಕವೊಂದರಲ್ಲಿ (ನಮ್ ಬ್ರಾಹ್ಮಣ್ಕೆ) "ಕೇ=ನೀರಿನಲ್ಲಿ, ಸರತಿ=ಚಲಿಸುತ್ತದೆ" ಎಂದು ವ್ಯುತ್ಪತ್ತಿಯನ್ನು ಹೇಳಿ, 'ಕೇಸರೀ ಎಂದರೆ ಮೀನು ಎಂದು ಹೇಳಿದ್ದಾರೆ.

(ii) 'ವಿಶ್ವಾಸ' ಎಂಬ ಶಬ್ದಕ್ಕೆ ನಂಬಿಕೆ, ಪ್ರೀತಿ, ಸ್ನೇಹ ಎಂಬ ಅರ್ಥಗಳಿವೆಯಷ್ಟೆ. ಕುಚೋದ್ಯಕ್ಕಾಗಿ, ವಿಶ್ವಾಸ='ವಿಗತಶ್ವಾಸ' ಎಂದರೆ ಉಸಿರುಹೋದದ್ದು=ಶವ ಎಂದು ಅರ್ಥ ಮಾಡಬಹುದು.

(iii) ಪಂಕಜ=ಕೆಸರಿನಲ್ಲಿ ಹುಟ್ಟಿದ್ದು, ತಾವರೆ. ಇದರ ಪ್ರಸಿದ್ಧಾರ್ಥ. ಮಣ್ಣುಹುಳು ಎಂದು ಅರ್ಥಮಾಡಬಹುದು.

೨.

**ಅಭಿಜ್ಞಾನಶಾಕುಂತಲ ನಾಟಕದಲ್ಲಿನ ಶುಶ್ರೂಷಸ್ವ ಗುರೂನ್ ಎಂದಾರಂಭವಾಗುವ ಪದ್ಯದ 'ವಾಮಾಃಕುಲಸ್ಯಾಧಯಃ' ಎಂಬ ಭಾಗದ ಅರ್ಥ ವಿಚಾರ.**

ಈ ಲೇಖನದಲ್ಲಿ ಜೋಶಿಯವರು ಕುಲಸ್ಯಾಧಯಃ ಕುಲಸ್ಯ - ಅಧಯಃ ಎಂದು ಪದ ವಿಭಾಗ ಮಾಡಿ "ಅಧಿ ಎಂದರೆ ಮೊದಲು ಹುಟ್ಟಿದ್ದು" ಎಂದು ಹೇಳಿ ವೇದದಲ್ಲಿನ ಎರಡು ಪ್ರಯೋಗಗಳನ್ನು ಉದಾಹರಿಸಿದ್ದಾರೆ. ಈ ಎರಡು ಪ್ರಯೋಗಗಳೂ ಸಹ ಋಗ್ವೇದದ ಹತ್ತನೇ ಮಂಡಲದಲ್ಲಿನ, 'ಋತಂ ಚ ಸತ್ಯಂ ಚ' ಎಂದು ಮೊದಲಾಗುವ 190ನೆಯ ಸೂಕ್ತದ ಭಾಗಗಳು. ಇಲ್ಲಿ 'ಅಧಿ' ಶಬ್ದಕ್ಕೆ ಮೊದಲು ಹುಟ್ಟಿದ್ದು ಎಂದು ಅರ್ಥವಲ್ಲ.

"ಋತಂ ಚ ಸತ್ಯಂ ಚ ಅಭೀದ್ಧಾತ್ ತಪಸಃ ಅಧಿ ಅಜಾಯತ" ಎಂಬ ವಾಕ್ಯಕ್ಕೆ, "ಋತ ಎಂದರೆ ವಾಕ್; ಸತ್ಯ ಎಂದರೆ ಸತ್ಯವಾದ ವಾಕ್, ಪ್ರಾಣ. ಇವೆರಡೂ ತಪೋನಿಷ್ಠನಾದ ಬ್ರಹ್ಮನಿಂದ ಹುಟ್ಟಿದುವು" ಎಂದು **ವೇಂಕಟಮಾಧವಾಚಾರ್ಯ**ರ ವ್ಯಾಖ್ಯಾನ. ಋತ ಎನ್ನುವುದು ಸತ್ಯದ ಹೆಸರು; ಇದು ಮನಸ್ಸಂಕಲ್ಪರೂಪವಾದದ್ದು. ಯಥಾರ್ಥವನ್ನು ನುಡಿಯುವುದು ವಾಚಿಕ ಸತ್ಯ. ಇವೆರಡೂ ಸೃಷ್ಟ್ಯರ್ಥವಾಗಿ ತಪಸ್ಸು ಮಾಡಿದ ಬ್ರಹ್ಮನ ತಪಸ್ಸಿನಿಂದ ಅನಂತರ ಉತ್ಪನ್ನವಾದುವು. ಅಥವಾ ಅಭೀದ್ಧಾತ್ = ಸರ್ವತ್ರ ಪ್ರಕಾಶಮಾನನಾದ ಪರಮಾತ್ಮನಿಂದ ಋತ ಮತ್ತು ಸತ್ಯಗಳು ಹುಟ್ಟಿದುವು" ಎಂದು ಸಾಯಣ ಭಾಷ್ಯ.[5]

"ಸಮುದ್ರಾತ್ ಅರ್ಣವಾತ್ ಅಧಿ ಸಂವತ್ಸರೋ ಅಜಾಯತ" ಎಂಬ ವಾಕ್ಯಕ್ಕೆ "ಸಮುದ್ರದಿಂದ ಸಂವತ್ಸರವು ಹುಟ್ಟಿತು" (ಎಂದರೆ ಸಮುದ್ರದ ಅನಂತರ ಸಂವತ್ಸರವು

---

5. ಋತಂ ಚ ಸತ್ಯಂಚ ಅಭೀದ್ಧಾತ್ ತಪ್ಯಮಾನಾತ್ ಬ್ರಹ್ಮಣಃ ಅಜಾಯತ ॥ "ತತ್ ಯತ್ ಋತಂ ಇತಿವಾಕ್. ಸಾಯತ್ ಸತ್ಯಂ ಇತಿ ಪ್ರಾಣಃ ಇತಿಶಾಕಟಾಯನಕಂ।

(ವೇಂಕಟಮಾಧವಾಚಾರ್ಯ ವ್ಯಾಖ್ಯಾನ)

Pub Vishubhvaranand Vedic Research Institute, Hoshiarpur

ಋತಮಿತಿ ಸತ್ಯನಾಮ। ಋತಂ ಮಾನಸಂ ಯಥಾರ್ಥ ಸಂಕಲ್ಪನಂ, ಸತ್ಯಂ ವಾಚಿಕಂ ಯಥಾರ್ಥ ಭಾಷಣಂ। × × ತತ್ಸರ್ಗಂ ಅಭೀದ್ಧಾತ್ ಅಭಿತಪ್ತಾತ್ ಬ್ರಹ್ಮಣಾಪುರಾ ಸೃಷ್ಟ್ಯರ್ಥಂ ಕೃತಾತ್ ತಪಸಃ ಅಧಿ। ಅಧ್ಯುಪರ್ಯರ್ಥೇ। ಉಪರ್ಯಜಾಯತ। ಉದಪದ್ಯತ × × ತಪಶ್ಚಾತ್ರ ಸ್ರಷ್ಟವ್ಯಪರ್ಯಾಲೋಚನ ಲಕ್ಷಣಂ। × × ಯದ್ವಾ ಅಭೀದ್ಧಾತ್ ಅಭಿತಃ ಪ್ರಕಾಶಮಾನಾತ್ ಪರಮಾತ್ಮನೋ ಮಾಯಾಧಿಷ್ಠಾನ-ರೂಪಾತ್ ಉಪಾದಾನ ಭೂತಾತ್ ಋತಂ ಸತ್ಯಂಚ ಅಜಾಯತ । (ಸಾಯಣಾಚಾರ್ಯ ವಿರಚಿತ ಮಾಧವೀಯ ವೇದಾರ್ಥ ಪ್ರಕಾಶನೆಂಬ ಋಗ್ಭಾಷ್ಯ)

ಪ್ರಕಾಶಕ-ಪುಣೆ ವೈದಿಕ ಸಂಶೋಧನ ಮಂಡಲ

ಹುಟ್ಟಿತು) ಎಂದು ಅರ್ಥ ಹೇಳಿದ್ದಾರೆ ವೇಂಕಟಮಾಧವಾಚಾರ್ಯರು. ಇವರು "ಅಧಿ" ಶಬ್ದಕ್ಕೆ ಬೇರೆಯಾಗಿ ವ್ಯಾಖ್ಯಾನ ಮಾಡಿಲ್ಲ. ಸಾಯಣಾಚಾರ್ಯರು "ಸಮುದ್ರದ ಸೃಷ್ಟಿಯಾದ ನಂತರ, ಸಂವತ್ಸರ ಶಬ್ದದಿಂದ ಸೂಚಿತವಾದ "ಕಾಲ"ವೆಲ್ಲವೂ ಉತ್ಪನ್ನವಾಯಿತು" ಎಂದು ವಿವರಿಸಿದ್ದಾರೆ.[6]

"ಅಧಿ" ಶಬ್ದವು ಅವ್ಯಯ. ಇದು ಧಾತುವಿಗೆ ಉಪಸರ್ಗವಾಗಿಯೂ ನಾಮಪದದೊಡನೆ ಉಪಪದವಾಗಿಯೂ ಪ್ರಯೋಗಿಸಲ್ಪಡುತ್ತದೆ. ಈ ಮಂತ್ರಗಳಲ್ಲಿ ಭಾಷ್ಯಕಾರರು ಅದನ್ನು ತಪಸಃ ಮತ್ತು ಅರ್ಣವಾತ್ ಎಂಬ ಪಂಚಮೀವಿಭಕ್ತ್ಯಂತ ಪದಗಳೊಡನೆ ಅನ್ವಯಿಸಿದ್ದಾರೆ. ಸಾಯಣಾಚಾರ್ಯರು "ಅಧಿ" ಶಬ್ದಕ್ಕೆ "ಉಪರಿ" (ಅನಂತರ) ಎಂದು ಅರ್ಥ ಹೇಳಿದ್ದಾರೆ. Wilsonರವರು ತಮ್ಮ ಋಗ್ವೇದದ ಆಂಗ್ಲಾನುವಾದದಲ್ಲಿ "ಅಧಿ" ಶಬ್ದವನ್ನು from, after-wards ಎಂದು ಅನುವಾದಿಸಿದ್ದಾರೆ.

ಮೇಲಿನ ವೈದಿಕಪ್ರಯೋಗಗಳಲ್ಲಿರುವ "ಅಧಿ" ಅವ್ಯಯವಾದುದರಿಂದ ಅದಕ್ಕೆ "ಅಧಯಃ" ಎಂಬ ಬಹುವಚನರೂಪವಿಲ್ಲ. ಆಪ್ಟೆ ಕೋಶದಲ್ಲಿ "ಅಧಿಃ" ಎಂಬ ನಾಮಪದಕ್ಕೆ Mental pain or Agony (ಮಾನಸಿಕ ಚಿಂತೆ, ವ್ಯಥೆ) ಎಂಬ "ಆಧಿ" ಶಬ್ದಕ್ಕಿರುವ ಅರ್ಥಗಳನ್ನೇ ಕೊಟ್ಟಿದ್ದಾರೆ.

ನನ್ನ ಮಾನ್ಯಮಿತ್ರರಾದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕ ಶ್ರೀ ಕೌಳಗಿ ಶೇಷಾಚಾರ್ಯರು ತಮ್ಮ 21–11–94ರ ಪತ್ರದಲ್ಲಿ, "ಆಧಿ ಮತ್ತು ಅಧಿಷ್ಠಾನ ಪರ್ಯಾಯ ಪದಗಳಲ್ಲವೇ? ಪ್ರಸಕ್ತಶ್ಲೋಕದಲ್ಲಿ ಆಧಿಯನ್ನು ಪೀಡಾರ್ಥದಲ್ಲೂ ಮತ್ತು ಅಧಿಷ್ಠಾನಾರ್ಥದಲ್ಲೂ ಕಾಳಿದಾಸ ಪ್ರಯೋಗಿಸಿಲ್ಲವೇ" ಎಂದು ಕೇಳಿದ್ದಾರೆ. ಕಲ್ಕತ್ತಾದ ರಮೇಂದ್ರಮೋಹನಬೋಸ್ ಅವರ ಅಭಿಜ್ಞಾನ ಶಾಕುಂತಲದ ಆವೃತ್ತಿಯ ಈ ಭಾಗದ ಫೋಟೋ ಪ್ರತಿಯನ್ನು ದಯೆಯಿಟ್ಟು ಕಳುಹಿಸಿ ತುಂಬ ಉಪಕಾರ ಮಾಡಿದ್ದಾರೆ.

ಬೋಸ್ ಅವರು ತಮ್ಮ ಸಂಸ್ಕೃತ ವ್ಯಾಖ್ಯಾನದಲ್ಲಿ 'ವಾಮಾ' ಶಬ್ದಕ್ಕೆ 'ಯೌವನದಿಂದ ಉಂಟಾದ ಗರ್ವದಿಂದ ಪ್ರತೀಪ=ಪ್ರತಿಕೂಲವಾಗಿ ಆಚರಿಸುವವಳು' ಎಂದೂ 'ಆಧಿ'ಶಬ್ದಕ್ಕೆ ಪೀಡೆ ಎಂದೂ ಅರ್ಥಹೇಳಿ ಅಮರಕೋಶ ಪಂಕ್ತಿಯನ್ನು ಉದಾಹರಿಸಿದ್ದಾರೆ;

---

6. ಸಮುದ್ರಾತ್ ಉದಕವತಃ ಸಂವತ್ಸರಃ ಅಬ್ದಃ ಅಜಾಯತ ।
(ವೇಂಕಟಮಾಧವಾಚಾರ್ಯ)

ಅರ್ಣವಾತ್ ಸಮುದ್ರಾತ್ ಸೃಷ್ಟಾತ್ ಅಧಿ ಊರ್ಧ್ವಂ ಸಂವತ್ಸರಃ
ಸಂವತ್ಸರೋಪಲಕ್ಷಿತಃ ಸರ್ವಃ ಕಾಲಃ ಅಜಾಯತ । (ಸಾಯಣಾಚಾರ್ಯ)

"ಉಪದೇಶಿಸಿರುವುದಕ್ಕೆ ವಿರೋಧವಾಗಿ ವರ್ತಿಸಬೇಡ ಎಂದು ಭಾವ" ಎಂದೂ ಹೇಳಿರುತ್ತಾರೆ.[7]

ಮುಂದೆ, ತಮ್ಮ ಇಂಗ್ಲಿಷ್ ಟಿಪ್ಪಣಿಯಲ್ಲಿ, 'ವಾಮಾ' ಶಬ್ದಕ್ಕೆ (i) ಸ್ತ್ರೀ ಸಾಮಾನ್ಯಳು ಅಥವಾ (ii) ಪ್ರತಿಕೂಲವಾಗಿ ಆಚರಿಸುವವಳು (ಪ್ರತೀಪಾ) ಎಂದೂ, 'ಆಧಿ' ಶಬ್ದಕ್ಕೆ (i) ಶಾಪ, ಪೀಡೆ ಅಥವಾ (ii) ಮುಖ್ಯಾಧಾರ (ಅಧಿಷ್ಠಾನ) ಎಂದೂ ಅರ್ಥ ಹೇಳಿ, "ಆದುದರಿಂದ. ಪದ್ಯದ ಕೊನೆಯ ಸಾಲಿನ ಅನ್ವಯವು 'ಏವಂ ಯುವತಯಃ ವಾಮಾಃ (ನಾರ್ಯಃ) ಕುಲಸ್ಯ ಆಧಯಃ (ಭೂತ್ವಾ ಕಾಲೇನ) ಗೃಹಿಣೀ ಪದಂಯಾಂತಿ" ಎಂದು ಬೇರೆ ರೀತಿಯಲ್ಲಿ ಆಗಬಹುದೆಂದೂ, ಆಗ ಆ ಸಾಲಿನ ಅರ್ಥವು "ಹೀಗೆ ಯುವತಿಯರಾದ ಸ್ತ್ರೀಯರು ತಮ್ಮ ಸಂಸಾರಕ್ಕೆ ಮುಖ್ಯಾಧಾರವಾಗುತ್ತಾರೆ ಮತ್ತು (ಕಾಲ ಸಂದಂತೆ) 'ಗೃಹಿಣೀ' ಸ್ಥಾನವನ್ನು ಪಡೆಯುತ್ತಾರೆ" ಎಂದು ಆಗುವುದೆಂದೂ ಹೇಳಿದ್ದಾರೆ.[8]

ಬೋಸ್ ಅವರು ಕೊಟ್ಟಿರುವ ಅನ್ವಯದಲ್ಲಿ 'ಯುವತಯಃ' ಎಂಬ ಶಬ್ದಕ್ಕೆ ಯೌವನವತಿಯರಾದ ಸ್ತ್ರೀಯರು ಎಂದು ಅರ್ಥವಾಗುವುದರಿಂದ, "ವಾಮಾಃ" (ನಾರ್ಯಃ) ಎಂಬ ಪದ ಅನವಶ್ಯಕವಾಗುತ್ತದೆ. ಆದುದರಿಂದ 'ವಾಮಾಃಕುಲಸ್ಯಾಧಯಃ' ಎಂಬುದನ್ನು ಸ್ವತಂತ್ರವಾಕ್ಯವಾಗಿ ತೆಗೆದುಕೊಳ್ಳುವುದೇ ನನಗೆ ಯುಕ್ತವಾಗಿ ಕಾಣುತ್ತದೆ. ಜೋಶಿಯವರ "ಅದಕ್ಕೆ, ಕ್ರಿಯಾಪದವಿಲ್ಲ ಕರ್ತೃಪದವಿಲ್ಲ" ಎಂಬ ಆಕ್ಷೇಪ ಸರಿಯಲ್ಲ. ಏಕೆಂದರೆ, 'ವಾಮಾಃ' ಎಂಬುದೇ ಕರ್ತೃ. "ಭವಂತಿ" (ಆಗುತ್ತಾರೆ) ಎಂಬ ಕ್ರಿಯಾಪದ ವಾಡಿಕೆಯಂತೆ ಅಧ್ಯಾಹಾರವಾಗುತ್ತದೆ.

---

7. ವಾಮಾಃ ಯೌವನಜನಿತಗರ್ವೇಣ ಪ್ರತೀಪಾಃ ಪ್ರತಿಕೂಲಚಾರಿಣ್ಯಃ ಇತ್ಯರ್ಥಃ। XX 'ಕುಲಸ್ಯ' ವಂಶಸ್ಯ 'ಆಧಯಃ' ಪೀಡಾಃ [ಬಂಧಕಂ ವ್ಯಸನಂ ಚೇತಃಪೀಡಾಧಿಷ್ಠಾನ ಮಾಧಯಃ ಇತ್ಯಮರಃ] ವ್ಯಾಧಯ ಇವ ಕ್ಲೇಶದಾಯಿನ್ಯಃ ಭವಂತಿ। ಅತಃ ಉಕ್ತರೂಪ ವಿಪರೀತಾ ಮಾಭೂಃ ಇತಿಭಾವಃ।
   (Modern Book Agency Pvt. Ltd., Bankim Chandra Chatterjee Street, Calcutta-12 ಇವರಿಂದ ಪ್ರಕಟವಾದ ರಮೇಂದ್ರ ಮೋಹನ ಬೋಸ್‌ರವರ ಗ್ರಂಥದ ನಾಲ್ಕನೆಯ ಆವೃತ್ತಿ (1963)ಯಲ್ಲಿ 400ನೇ ಪುಟ.)
8. ವಾಮಾ XX It means either (i) women in general, or (ii) one acting in a refractory way (ಪ್ರತೀಪಾ). Similarly ಆಧಿ – means either (i) a curse or bane (ಪೀಡಾ) or (ii) main-stay (ಅಧಿಷ್ಠಾನ). Hence the last line may be construed differently thus 'ಏವಂ ಯುವತಯಃ ವಾಮಾಃ (ನಾರ್ಯಃ) ಕುಲಸ್ಯ ಆಧಯಃ (ಭೂತ್ವಾ ಕಾಲೇನ) ಗೃಹಿಣೀಪದಂ ಯಾಂತಿ। In this way young women become the main-stay of their family (and incourse of time) attain etc.
   — ಅದೇ, ಪುಟ 402

ಹೀಗೆ, ಪಂಡಿತರು ಹೇಳಿರುವ ಅರ್ಥವೂ,[9] ಜೋಶಿಯವರು ತಮ್ಮ ಮೊದಲನೆಯ ಲೇಖನದಲ್ಲಿ ಕೊಟ್ಟಿದ್ದ ಭಾವಾರ್ಥವೂ ಎರಡೂ ಸಂದರ್ಭಕ್ಕೆ ಹೊಂದುತ್ತವೆ ಮತ್ತೂ ಎರಡೂ ಪ್ರಕೃತವೇ.[10] ಆದುದರಿಂದ, ಪದ್ಯದ ಕೊನೆಯ ಸಾಲಿಗೆ "ಹೀಗೆ (ಆಚರಿಸುವುದರಿಂದ) ಯುವತಿಯರು ಗೃಹಿಣೀಸ್ಥಾನವನ್ನು ಪಡೆಯುತ್ತಾರೆ. ಸ್ತ್ರೀಯರೇ ಸಂಸಾರಕ್ಕೆ ಮುಖ್ಯವಾದ ಆಧಾರ. ಪ್ರತಿಕೂಲವಾಗಿ ವರ್ತಿಸುವವರು ಕುಲಕ್ಕೆ ವ್ಯಥೆಯನ್ನುಂಟು ಮಾಡುತ್ತಾರೆ," ಎಂದು ಅರ್ಥಮಾಡುವುದು ಸೂಕ್ತವೆಂದು ತೋರುತ್ತದೆ.

ಕಣ್ವರ ಉಪದೇಶ ವಾಕ್ಯಗಳು ಹಿತವಚನಗಳು ಮಾತ್ರವಲ್ಲ; ಅವು ಎಚ್ಚರಿಕೆಯ ಮಾತುಗಳೂ ಸಹ, "ಪ್ರತಿಕೂಲವಾಗಿ ವರ್ತಿಸುವವರು ಕುಲಕ್ಕೆ ವ್ಯಥೆಯನ್ನುಂಟು ಮಾಡುತ್ತಾರೆ" ಎಂದು, ಉಪದೇಶಗಳನಂತರ, ಹೇಳಿದ ಮಾತ್ರದಿಂದ "ಕಣ್ವರಂಥ ಮೃದುಹೃದಯದ ತಂದೆ ಅಪನಂಬಿಕೆಯನ್ನು ಸೂಚಿಸಿ"ದಂತಾಯಿತೆಂದು ಹೇಳುವಂತಿಲ್ಲ; ಏಕೆಂದರೆ ಅವರೇ ಮುಂಚೆ (ಶ್ಲೋಕದ ಎರಡನೆಯ ಸಾಲಿನಲ್ಲಿ) "ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾಸ್ಮಪ್ರತೀಪಂಗಮಃ" (ಗಂಡನಿಂದ – ಯಾವಾಗಲಾದರೊಮ್ಮೆ– ಅಪಮಾನಿತಳಾದರೂ ಕೋಪದಿಂದ ಅವನಿಗೆ ಪ್ರತಿಕೂಲೆಯಾಗಬೇಡ; ಪತಿಯೊರ್ಮೆ ಹೇವಗೊಳಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್) ಎಂದು ಎಚ್ಚರಿಸಿದ್ದಾರಷ್ಟೆ. ಈ ವಾಕ್ಯವು ಮುಂದೆ ದುಷ್ಯಂತನಿಂದ ಶಕುಂತಲೆ ತಿರಸ್ಕೃತೆಯಾಗುವುದರ ಸೂಚನೆಯಂತಿದೆ.

---

9. ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳ "ಕರ್ಣಾಟಕ ಶಾಕುಂತಲ ನಾಟಕ"ದಲ್ಲಿ ಈ ಪದ್ಯದ ಅನುವಾದ ಹೀಗಿದೆ:

   ಹಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ
   ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್ ।
   ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್
   ಗರತಿಯುರಪ್ಪುರಂತಿರದರಸ್ವಯಕಾಧಿಯನುಂಟು ಮಾಳ್ಪರಾ ॥

   (ಅಂಕ 4, ಪದ್ಯ 96)

   –ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳ ಸಮಗ್ರ ಕೃತಿಗಳು; ಪ್ರಕಾಶಕರು- ಪ್ರಬೋಧ ಪುಸ್ತಕಮಾಲೆ, ಬಸವೇಶ್ವರ ರಸ್ತೆ, ಮೈಸೂರು-4 (1977)

10. 'ವಾಮಾ' ಮತ್ತು 'ಆಧಿ' ಶಬ್ದಗಳಿಗೆ ಅಪ್ರಸಿದ್ಧಾರ್ಥಗಳನ್ನು ಹೇಳಬೇಕಾಗುವುದೆಂಬ ಕಾರಣಕ್ಕಾಗಿ, M. R. ಕಾಳೆಯವರು "ಸ್ತ್ರೀಯರೇ ಸಂಸಾರಕ್ಕೆ ಮುಖ್ಯಾಧಾರ" ಎಂಬ ಅರ್ಥವನ್ನು ಒಪ್ಪಿಲ್ಲ.

    "Some construe the fourth line as ವಾಮಾಃ ರಮಣೀಯಾಃ ಯುವತಯಃ ಕುಲಸ್ಯ ಆಧಯಃ ಆಧಾರಃ ಪ್ರತಿಷ್ಠಾ ಇತಿಯಾವತ್ ಸತ್ಯಃ ಏವಂ ಗೃಹಿಣೀಪದಂ ಯಾಂತಿ. But this is not a good way, as ವಾಮಾ and ಆಧಿ have to be taken in an obscure sense."

    ಅಭಿಜ್ಞಾನ ಶಾಕುಂತಲಂ of ಕಾಲಿದಾಸ, 1994 reprint of 10th edition (1969)-Motilal Banarsidas, Delhi, Page 111 of notes. ಇದರ ಮೊದಲ ಆವೃತ್ತಿ 1898ರಲ್ಲಿ ಪ್ರಕಟವಾದುದು.

೩.

**ಶಾಕುಂತಲದ ಭರತವಾಕ್ಯದ ಉತ್ತರಾರ್ಧದಲ್ಲಿನ "ಮಮಾಪಿಚ ಕ್ಷಪಯತು ನೀಲಲೋಹಿತಃ ಪುನರ್ಭವಂ" ಎಂಬ ಭಾಗದ ಅರ್ಥವಿಚಾರ.**

ಮೊದಲಿನ ಲೇಖನದಲ್ಲಿ ಜೋಶಿಯವರೇ "ಬೇರೆ ಬೇರೆ ಮುದ್ರಣದ ಪುಸ್ತಕಗಳನ್ನು ನೋಡಿದರೂ ಎಲ್ಲಿಡೆಯೂ 'ಪುನರ್ಭವಂ' ಕಂಡಿತೇ ಹೊರತು 'ಪರಿಭ್ರಮಂ' ಕಾಣಲೇ ಇಲ್ಲ", ಎಂದು ಹೇಳಿದ್ದಾರೆ. ಪಾಠವನ್ನು ತಿದ್ದುವುದಕ್ಕೆ ಆಧಾರವಾಗಲೀ, ತಿದ್ದುವ ಅವಶ್ಯಕತೆಯಾಗಲೀ ಇಲ್ಲವೆಂದು ನನ್ನ ಹಿಂದಿನ ಲೇಖನದಲ್ಲೇ ನಿರೂಪಿಸಿದ್ದೇನೆ. ಈಗಿರುವ 'ಪುನರ್ಭವಂ' "ಶಬ್ದವೇ ಸಂದರ್ಭಕ್ಕೆ ಹೊಂದುತ್ತದೆ. ಈಗ ಜೋಶಿಯವರು "ಪುನರ್ಭವ ನಾಶವಾದ ಮಾತ್ರಕ್ಕೆ ಮೋಕ್ಷವೇ ಆದೀತೆಂಬ ಭರವಸೆ ಎಲ್ಲಿದೆ?" ಎಂದು ಪ್ರಶ್ನಿಸಿದ್ದಾರೆ. ಪುನರ್ಭವ (ಎಂದರೆ ಪುನರ್ಜನ್ಮ)ವಿಲ್ಲದುದೇ ಮೋಕ್ಷ.

ಕ್ಷೀರಸ್ವಾಮಿಯು ತನ್ನ ಅಮರಕೋಶವ್ಯಾಖ್ಯಾನದಲ್ಲಿ ಮಹಾನಂದ ಮತ್ತು ಅಪುನರ್ಭವ ಈ ಎರಡು ಶಬ್ದಗಳನ್ನು ಮೋಕ್ಷಕ್ಕೆ ಪರ್ಯಾಯ ಪದಗಳಾಗಿ ಕೊಟ್ಟಿದ್ದಾನೆ. [11] ಆಪ್ಟೆಯವರು ತಮ್ಮ ಕೋಶದಲ್ಲಿ ಅಪುನರ್ಭವ ಎಂಬ ಶಬ್ದಕ್ಕೆ Not being born again (ಮತ್ತೆ ಹುಟ್ಟದಿರುವುದು), final beatitude (ಮೋಕ್ಷ) ಎಂಬ ಅರ್ಥಗಳನ್ನು "ತುಲಯಾಮ ಲವೇನಾಪಿ ನ ಸ್ವರ್ಗಂ ನ ಅಪುನರ್ಭವಂ" [12] ಎಂಬ ಭಾಗವತದಲ್ಲಿನ ಪ್ರಯೋಗವನ್ನೂ ಕೊಟ್ಟಿದ್ದಾರೆ. ಶಂಕರಾಚಾರ್ಯರ ಸ್ತೋತ್ರಗಳಲ್ಲೂ 'ಅಪುನರ್ಭವ' ಶಬ್ದವು ಮೋಕ್ಷವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. [13] ಇತರ ಸಂಸ್ಕೃತಕೋಶಗಳಲ್ಲೂ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ

---

11. ಭಾವೇಭ್ಯೋಽಪವರ್ಜನಂ ಅಪವರ್ಗಃ। ಮಹಾನಂದೋ ಅಪುನರ್ಭವಶ್ಚ॥–ಧೀವರ್ಗದ "ಮುಕ್ತಿಃ ಕೈವಲ್ಯ ನಿರ್ವಾಣಶ್ರೇಯೋ ನಿಶ್ಶ್ರೇಯಸಾಮೃತಂ। ಮೋಕ್ಷೋಽಪವರ್ಗೋಽ" ಎಂಬ ಭಾಗದವ್ಯಾಖ್ಯಾನದಲ್ಲಿ.

12. ತುಲಯಾಮ ಲವೇನಾಪಿ ನಸ್ವರ್ಗಂ ನ ಅಪುನರ್ಭವಂ। ಭಗವತ್ಸಂಗಿಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ॥ (ಶ್ರೀ ಮದ್ಭಾಗವತ, ಪ್ರಥಮಸ್ಕಂಧ- 18ನೇ ಅಧ್ಯಾಯದ 13ನೆಯ ಶ್ಲೋಕ)–Gorakhpur Edition.

13. ಆರಾಧಯಾಮಿ ಮಣಿಸನ್ನಿಭಮಾತ್ಮಲಿಂಗಂ।
ಮಾಯಾಪುರೀಹೃದಯ ಪಂಕಜಸನ್ನಿವಿಷ್ಟಂ॥
ಶ್ರದ್ಧಾನದೀ ವಿಮಲಚಿತ್ತಜಲಾಭಿಷೇಕೈಃ
ನಿತ್ಯಂ ಸಮಾಧಿಕುಸುಮೈಃ ಅಪುನರ್ಭವಾಯ–(ನಿರ್ಗುಣಮಾನಸ ಪೂಜಾಸ್ತೋತ್ರ)

ನಿಘಂಟಿನಲ್ಲಿಯೂ [14] ಈ ಅರ್ಥಗಳೂ, ಅವುಗಳಿಗೆ ಪ್ರಯೋಗಗಳೂ ಇವೆ.

(ನನ್ನ ಹಿಂದಿನ ಮತ್ತು ಈಗಿನ ಲೇಖನಗಳೆರಡರಲ್ಲಿಯೂ ಕಂಡು ಬರುವ ಆಧಾರ ಗ್ರಂಥಗಳ ಮುದ್ರಣ ಮೊದಲಾದ ವಿವರಗಳನ್ನು ಹಿಂದಿನ ಲೇಖನದಲ್ಲಿ ಕೊಟ್ಟಿರುವುದ ರಿಂದ, ಇಲ್ಲಿ ಮತ್ತೆ ಕೊಟ್ಟಿಲ್ಲ).



14. ಅಪುನರ್ಭವ(ನಾ) ೧. ಮತ್ತೆ ಹುಟ್ಟದಿರುವುದು ಪುನರ್ಜನ್ಮವಿಲ್ಲದಿರುವುದು, ಮೋಕ್ಷ: ಶಾನ್ತಿಸೇನಮುನೀಶನಾಕ್ಕಿಎ ಬೆಳ್ಗೊಳ ಅದ್ರಿಮೇಲಶನಾದಿವಿಟ್ಟಪುನರ್ಭವಕ್ಕೆಱುತಿಆಗಿ (ಎಪಿಗ್ರಾಫಿಯ ಕರ್ನಾಟಕ || ೩೧-೪)
೨. ಪುನರ್ಜನ್ಮವಿಲ್ಲದವನು, ಮೋಕ್ಷವನ್ನು ಪಡೆಯುವವನು: ಅಪುನರ್ಭವನಾಪ್ತಂ ತಲ್ಲಪನೋದಿತಮಾಗಮಂ (ಸುಕುಮಾರಚರಿತಂ ೬-೨೬)

# ಜಾತ್ಯೇಕ ವಚನ - ಒಂದು ಮರು ಗಮನಿಕೆ

—ಎಂ. ಜಿ. ವಾರಿ

1. ದ್ರಾವಿಡ ಗುಂಪಿಗೆ ಸೇರಿದ ಕನ್ನಡವು ದ್ರಾವಿಡ ಮೂಲದ ಅನೇಕ ಲಕ್ಷಣಗಳನ್ನು ಗರ್ಭೀಕರಿಸಿಕೊಂಡಿರುವುದೇನೋ ನಿಜ. ಹೀಗಿರುವಾಗ ಲಿಂಗವಿಂಗಡಣಾ ವ್ಯವಸ್ಥೆಯಲ್ಲಿರುವ ದ್ವಿವಿಧಾನಕ್ರಮ (ಸಬುದ್ಧಿಕ – ಅಬುದ್ಧಿಕ, ಅಥವಾ ಮಹತ್–ಅಹಮತ್ ವರ್ಗ)ವನ್ನು ಕೇಶಿರಾಜ ತನ್ನದೆ ಆದ ನಿರೂಪಣಾ ಮಾರ್ಗದಲ್ಲಿ ಪತ್ತೆ ಹಚ್ಚಿದ್ದಾನೆಂಬುದನ್ನು ಈಗಾಗಲೇ ಕಂಡೂ ಆಗಿದೆ.[1]

2. ಇನ್ನು ವಾಕ್ಯರಚನೆಯೊಳಗಿನ ವಚನವ್ಯವಸ್ಥೆಗೆ ಸಂಬಂಧಪಟ್ಟಂತೆ ಕನ್ನಡವೂ ಸಬುದ್ಧಿಕ–ಅಬುದ್ಧಿಕ ಎಂದೇ ಗೆರೆ ಕೊರೆಯಲು ಸಾಧ್ಯವಾಗುವಂಥ ಲಕ್ಷಣವನ್ನೇ ತೋರ್ಪಡಿಸುತ್ತದೆ. ಇದರ ಪರಿಶೀಲನೆ ಒಂದಿಷ್ಟು ಕುತೂಹಲಜನ್ಯವೇ ಹೌದು.

3. ವಾಕ್ಯಸಂಬಂಧಿಯಾದ ಈ ವಚನವ್ಯವಸ್ಥೆ ಕುರಿತು ಈ ಮೊದಲು ಪ್ರಸ್ತಾಪಿಸಿದವರು ಕವಿರಾಜಮಾರ್ಗಕಾರ ಮತ್ತು ನಾಗವರ್ಮರಾದರೂ[2] ಇದರ ಸ್ಪಷ್ಟ ವಿವರ ನೀಡಲು ಯತ್ನಿಸಿದವನೆಂದರೆ ಕೇಶಿರಾಜ ಎನ್ನಬೇಕು.

ಈ ವ್ಯಾಕರಣ ಪ್ರಕ್ರಿಯೆಯ ವಿಷಯವನ್ನು 'ಜಾತ್ಯೇಕ ವಚನ'ವೆಂದೇ ಎಲ್ಲರೂ ಹೆಸರಿಸಿ ವಿವರಿಸಿದ್ದಾರೆ. ಇಲ್ಲಿ ಜಾತಿ ಎಂದರೆ–ಇವರ ಗ್ರಹಿಕೆಯ ನಿಟ್ಟಿನಿಂದ ಹೇಳುವುದಾದರೆ–ಪ್ರಾಣಿವರ್ಗ ಅಥವಾ ಪ್ರಾಣಿಸಮೂಹ ಎಂದೇ ಆಗಿದೆ.

4. ಈ ಜಾತ್ಯೇಕ ವಚನದ ಸಂಗತಿಯನ್ನು ಕೇಶಿರಾಜ ಮೂರು ಸೂತ್ರ (148, 149, ಮತ್ತು 150)ಗಳಲ್ಲಿ ಪ್ರಸ್ತಾಪಿಸಿದ್ದಾನೆ.

---

1. ಈ ಸಂಗತಿಯನ್ನು ನನ್ನದೆ ಆದ ಒಂದು ಲೇಖನದಲ್ಲಿ ವಿವರಿಸಿಯೂ ಇದ್ದೇನೆ. 'ಲಿಂಗಮೊಂಬತ್ತುತೆಱಂ'—ಒಂದು ಟಿಪ್ಪಣಿ, 'ಅಂಕಣ' ದ್ವೈಮಾಸಿಕ, ಮೇ-ಜೂನ್, ಸಂ-6, ಸಂ-5, 1985.
2. ಇದನ್ನು ಮೊದಲು ಪಿ. ಕೃಷ್ಣಭಟ್ಟರು ತಮ್ಮ ಗ್ರಂಥವಾದ 'ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತದ ಪ್ರಭಾವ'ದಲ್ಲಿ ಉಲ್ಲೇಖಿಸಿದ್ದಾರೆ. ಅಧ್ಯಾಯ–13, 'ವಾಕ್ಯರಚನೆ' ಪ್ರ. ಮು.: 1989, ಪುಟ: 329-331.

i) ಜಾತಿಸೂಚಕ ವರ್ಗದಲ್ಲಿ (ಪ್ರಾಣಿವರ್ಗಕ್ಕೆ ಅನ್ವಯಿಸುವ ಹಾಗೆ) ಕರ್ತೃಪದವು ಏಕವಚನವಾಗಿದ್ದರೂ ಬಹುವಚನವನ್ನು ಸೂಚಿಸಬಲ್ಲುದಾಗಿದೆ. ಜಾತಿ ಅಲ್ಲದಲ್ಲಿಯೂ ಈ ವಚನಪ್ರಕ್ರಿಯೆ ಕಂಡು ಬರುತ್ತದೆ.

ಉದಾ : ಆನೆ ನೂಂಕಿದವು–ಜಾತಿಯಲ್ಲಿ

ಮನಂ ಸಂಚಲಮಾದುವು–ಜಾತಿ ಇರದಲ್ಲಿ ಸೂ–148

ii) ಕರ್ತೃಕಾರಕ ಪದದ ಹಿಂದಿನ ವಿಶೇಷಣವು[3] ಏಕವಚನವಾಗಿದ್ದಾಗ ಕರ್ತೃಕಾರಕವೆನಿಸಿದ ವಿಶೇಷ್ಯವೂ ಏಕವಚನ ಸೂಚಿಯೇ ಆಗಿರುತ್ತದೆ.
ಉದಾ : ಇಂತುಟು ಕುದುರೆ, ನಡೆದುದು ಹಂಸೆ, ಸೂ–149

iii) ಜಾತಿ ಇಲ್ಲದಲ್ಲಿಯೂ ಅಂದರೆ ಸಂಖ್ಯಾವಸ್ತು, (ಗುಣಾಕಾರ ನಿಷ್ಪನ್ನವೆನಿಸಿದ ಮೊತ್ತವನ್ನು ಸೂಚಿಸುವ) ಸಂಖ್ಯಾವಾಚಕ, ಭಾವಸೂಚಿಪದ ಇವೆಲ್ಲ ಏಕವಚನದಲ್ಲಿದ್ದಾಗ್ಯೂ ಬಹುವಚನವನ್ನು ಬಿಂಬಿಸಲು ಸಮರ್ಥವಾಗಿರುತ್ತವೆ. ಅಲ್ಲದೆ ವಿಶೇಷಣ ಬಹುವಚನದಲ್ಲಿದ್ದರೂ ವಿಶೇಷ್ಯ ಏಕವಚನದಲ್ಲೆ ಇರುವುದುಂಟು. ಜಾತಿ ಪದದಂತೆಯೇ ಅರೆಜೀವ ಅಥವಾ ಚೈತನ್ಯ ಯುಕ್ತ ಪದಗಳಿಗೂ ಈ ಮಾತೆ ಅನ್ವಯಗೊಳ್ಳುತ್ತದೆ.

---

3. ನಡೆದುದು ಹಂಸೆ, ಉಲಿದುದು ಕೋಗಿಲೆ-ಎಂಬಲ್ಲಿಯ ನಡೆದುದು, ಉಲಿದುದು–ರೂಪಗಳನ್ನು ಕ್ರಿಯಾಪದಗಳೆಂದು ಕೇಶಿರಾಜ ಕರೆದಿರುವನು. ಆದರೆ ಬಂದು ಕರ್ತೃ ಪದದ ಹಿಂದೆ ಬಂದು ಅವುಗಳ ವಿಶಿಷ್ಟ ಕ್ರಿಯಾಸ್ವರೂಪವನ್ನು ಕೈಮಾಡಿ ತೋರಿಸುತ್ತವೆ-ಎನ್ನುವುದಾದರೆ ಆಗ ಇವು ವಿಶೇಷಣಗಳು ಅಥವಾ ಕೃಲ್ಲಿಂಗಗಳು ಎಂದೇ ಹೇಳಬೇಕಾಗುತ್ತದೆ. ಕ್ರಿಯಾಪದ ಎನ್ನುವುದಾದರೆ ಇವೆಲ್ಲ ಪುಟ್ಟ ವಾಕ್ಯಗಳಾಗಿ ತೋರುತ್ತವೆ. ವಿಶೇಷಣಗಳೆಂದರೆ ಒಂದು ವಾಕ್ಯದ ಕರ್ತೃಸ್ಥಾನದ ಪದರೂಪಗಳೆಂದು ಪರಿಗಣಿಸಬೇಕಾಗುತ್ತದೆ. ಹೀಗೆ ಭಾವಿಸುವುದೆ ಹೆಚ್ಚು ಸೂಕ್ತವೆಂದು ನನಗೆ ತೋರುತ್ತದೆ. ಏಕೆಂದರೆ ಈ ರೂಪಗಳು ವಿಶೇಷಣಗಳೆಂದು ತಿಳಿದಿದ್ದರೂ ಪ್ರಜ್ಞಾಪೂರ್ವಕವಾಗಿ ಇವು ವಿಶೇಷಣ ರೂಪದ ಕೃಲ್ಲಿಂಗಗಳೆಂದು ಒಪ್ಪಲು ಬಾರದಂಥ ಅನುಮಾನವು ಕೇಶಿರಾಜನನ್ನು ಕಾಡಿದೆ. "ಕೂಡಿದ, ನೋಡಿದ–ಎಂಬ ಕೃದಂತ ವಿಶೇಷಣಗಳನ್ನು ಕೃಲ್ಲಿಂಗವೆಂದು ಕೇಶಿರಾಜನು ನಿಶ್ಚಿತವಾಗಿ-ಅಭಿಪ್ರಾಯಪಟ್ಟಿದ್ದನೆಂದು ಹೇಳಲಾಗದು. ಏಕೆಂದರೆ ಈ ರೂಪದ ಶಬ್ದಗಳನ್ನು ಕೃದಂತಗಳೆಂದೇ ಗಣಿಸಿರುವನೆಂದು ಸೂತ್ರ 179ರಿಂದ ತಿಳಿದು ಬರುತ್ತದೆ. ಆದರೆ ನೋಡಿದಂ, ಕೂಡಿದಂ–ಎಂಬಲ್ಲಿಯ 'ಮ್' ಕಾರ ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಪೃಥಕ್ಕಾಗಿ ಭಾವಿಸಿದ್ದರಿಂದ ಈ ವಿಷಯದ ಬಗೆಗೆ ಗೊಂದಲ ಉಂಟಾಗಿರಬೇಕು."

-ನನ್ನ ಲೇಖನ, 'ಲಿಂಗ ಒಂದು ವಿವೇಚನೆ' ಸಾಧನೆ, ಸಂ-14, ಸಂ-4, 1985 ಅಡಿಟಿಪ್ಪಣಿ-2, ಪುಟ : 144.

ಉದಾ : ಸಂಖ್ಯಾವಸ್ತುವಿಗೆ—ಪತ್ತು ದೆಸೆ, ಮೂಱು ಲೋಕಂ
ಸಂಖ್ಯೆಗೆ—ಎರಡು ಅಯ್ದು, ಪತ್ತು ನೂಱು
ಭಾವ ಸೂಚಿ ಪದಕ್ಕೆ—ಕಣ್ಗಳ ಕೂರ್ಪು
ವಿಶೇಷ್ಯದ ಏಕವಚನಕ್ಕೆ—ನೇರಿದುವುಬೆರಲ್ ಸೂ-150

5. ಈ ಜಾತ್ಯೇಕವಚನದ ವಿಷಯಪ್ರಸ್ತಾಪದಲ್ಲಿ ಕೇಶಿರಾಜ ವಾಕ್ಯದ ಕರ್ತೃಕಾರಕದಲ್ಲಿ ಗುರ್ತಿಸಿದ ವಸ್ತು ಸಂಗತಿಗಳು ಈ ಕೆಳಗಿನಂತಿವೆ.—

| ಉದಾ : | | | | |
|---|---|---|---|---|
| i) | ಆನೆ ನೂಂಕಿದವು | (148) | ಜೀವ ಉಳ್ಳುವು | ಅಮಹತ್ ವರ್ಗ |
| | ಕೇಗಿದುದು ಸೋಗೆ | (149) | | |
| ii) | ನೇರಿದುವು ಬೆರಲ್ | (150) | ಚೈತನ್ಯ ಉಳ್ಳುವು | |
| | ಬೆಟ್ಟಿದುವು ಮೊಲೆ | (150) | | |
| iii) | ತ್ರಿಭುವನಂ | (148) | ಮೂರ್ತ ರೂಪದ ನಿರ್ಜೀವ ವಸ್ತು ಸಂಗತಿಗಳು | |
| | ಮೂಱು ಲೋಕಂ | (150) | | |
| iv) | ಮನಂ ಸಂಚಲಮಾದುವು | (148) | ಅಮೂರ್ತ ವಿಷಯ ಸಂಗತಿಗಳು | |
| | ಕುರುಳ್ಗಳ ಕರ್ಪು | (150) | | |

6. ಈ ಮೇಲಿನ ಕೇಶಿರಾಜನ ವಿವರಣೆಯೊಂದಿಗೆ ಇಂದಿಗೂ ಚಾಲ್ತಿಯಲ್ಲಿರುವ ಆಡುನುಡಿಯ[4] ವೀಕ್ಷಣೆಯಿಂದ ಈ ವಿಷಯಕ್ಕೆ ಸಂಬಂಧಿಸಿದಂತೆ ಇಲ್ಲಿ

4. ಬಾದಾಮಿ ತಾಲೂಕಿನಲ್ಲಿ ಚಾಲ್ತಿಯಲ್ಲಿದ್ದ ಕೆಲವು ಆಡುಮಾತಿನ ಪ್ರಯೋಗಗಳು.

(i) ಕುಂಬಾರ್ರsss ಗಡಿಗಿ ಹೊತಗೊಂಡ ಬರೊ ಕತ್ತಿ ಇವು (ಅತ್ಯಂತ ವಿರಳವಾಗಿ 'ಕತ್ತಿಗೊಳ್' ಎಂಬ ಪ್ರಯೋಗ ಉಂಟು.)

(ii) ಕತ್ತಿ ಹೋಗಿ ಕ್ವಾಣ ಆಗೂssವಂತ; ಹಾಂಗ ಬರಬರ್ತss ಇವ್ಕ 'ರ' ಬಿಟ್ಟು 'ಠ' ಗೊತ್ತಾಗೂವಲ್ದು. (ಮಕ್ಕಳ ಓದು-ಬರವಣಿಗೆ ಕುರಿತು ಹಿರಿಯರು ಹರಿಹಾಯುತ್ತ ಆಕ್ಷೇಪಣೆಗೈಯುವ ನುಡಿ ಇದು.)

(iii) ಒಂದ್ ತಟಿಗ ಜೆಲ್ಲ್ ಬಿದ್ರ ಸಾಕು ಇರಬಿ ಮುಕ್ಕರ್ತಾವು

(iv) ನಮ್ಮ್ ನಾಕ್ ಮನೀವು ಏಕ ಮಣ್ಣಿನ ಗ್ವಾಡೆಲಾ, ಹೀಂಗಾಗಿ ಇಲಿ ಆರಪಾರ ಗುದ್ದ ತೋಡ್ಯಾವು.

(v) 'ಪಾಪಾಗ ಹಾಲ್ ಕುಡಸರಿ' ಅಂತ ನಮ್ಮ್ದಗಿ ಎರಡ್ ನಾಯಿಮರೀನ ಬಗಲಾಗ ಹಿಡಕೊಂಡ ಬರೂದಾ!

(vi) ಹಿಂದ್ಕ ಈ ದಾಂಡಗ್ಯಾ ನಾಕ 'ತೊಲೀನ' ಹೊಗ್ಯಾಗಿಂದ ಸಾಗಸ ಗೊಂಡು ಬಂದ್ರಂತ

(vii) ಒಂದ್ ಅಣಿ ತಪ್ಪೀದ್ರ ನತ್ತ್ ಅಣಿತಪ್ಪಿದ್ಹಾಂಗ.

ಈ ಪ್ರಯೋಗಗಳಲ್ಲಿ ಕತ್ತಿ, ಇರಬಿ, ಗ್ವಾಡಿ, ಇಲಿ, ನಾಯಿಮರಿ, ತೊಲಿ ಅಣಿ ಇವು ಸ್ಪಷ್ಟವಾಗಿ ಬಹುವಚನವನ್ನೇ ಪ್ರತಿನಿಧಿಸುತ್ತವೆ.

ಕೆಲವು ವಿಚಾರಗಳನ್ನು ಮಂಡಿಸಲು ಸಾಧ್ಯವಿದೆ.

ವಿಶೇಷವಾಗಿ ಅಮಹತ್‌ವರ್ಗದ ವಾಕ್ಯರಚನೆಯಲ್ಲಿ 'ಜಾತಿ' ಎಂದು ಗುರ್ತಿಸಲಾಗುವ ಅಲ್ಲದೆ ಇತರೆ (ಅಮಹತ್ ವರ್ಗದ) ಕರ್ತೃಪದವು ಬಹುಮಟ್ಟಿಗೆ ಸ್ವಸ್ವರೂಪದಲ್ಲಿ ಅಂದರೆ ಏಕವಚನದಲ್ಲೆ ಬಳಕೆಯಾಗುವುದುಂಟು.[5] ಅದರ ವಚನ ಭೇದ ನಿರ್ಧಾರವಾಗುವುದು ಕ್ರಿಯಾಪದ ಇಲ್ಲವೆ ಅದರ ಹಿಂದಿರುವ ವಿಶೇಷಣದಿಂದಲೆ ಎನ್ನಬೇಕು. ಕೇಶಿರಾಜ ಕೊಟ್ಟಂಥ ಉದಾಹರಣೆಗಳೆಲ್ಲವೂ ನೇರವಾಗಿ ಅಮಹತ್ ವರ್ಗಕ್ಕೆ ಸೇರಿದಂಥವು ಆಗಿವೆ. ಒಟ್ಟಾರೆಯಾಗಿ ಈ ವ್ಯಾಕರಣ ಪ್ರಕ್ರಿಯೆಗೆ ಸಂಬಂಧಿಸಿದ ಭಾಷಾಪ್ರಯೋಗಗಳನ್ನೆಲ್ಲ ಹೆಕ್ಕಿ–ಅತ್ಯಂತ ವ್ಯವಸ್ಥಿತವಾಗಿ ಅಲ್ಲವಾದರೂ–ವಿವರಣೆ ಕೊಟ್ಟುದು ಅವನ ಪ್ರಾಮಾಣಿಕತೆಯನ್ನೂ ಸೂಕ್ಷ್ಮ ಗಮನಿಕೆಯನ್ನೂ ತೋರುವುದು.

7. ಈವರೆಗೆ ಚರ್ಚಿತವಾದ ಜಾತ್ಯೇಕವಚನದ ವಿಚಾರವನ್ನು ಇನ್ನಷ್ಟು ನಿಚ್ಚಳಗೊಳಿಸಿಕೊಳ್ಳಲು ಇಲ್ಲಿ ಇನ್ನೊಂದಿಷ್ಟು ಆಡುನುಡಿಯ ಪ್ರಯೋಗಗಳನ್ನು ಗಮನಿಸೋಣ.

i) ಹತ್ತು ಡಬ್ಬಿ
ii) ಎಂಟ್ ಮ್ಯಾಣದ್ ಬತ್ತಿ
iii) ಯಾಡ್ಡ್ ಗುಳಗಿ
iv) ಹತ್ ಇಪ್ಪತ್ತು[6]
v) ಜೋಡ ದೋತ್ರಾ
vi) ಎಲ್ಲಾರ್ ಸಿಟ್ಟು ಚೆಂಡ್ ಹಾಕದೆನ್ನ ಮ್ಯಾಲೆ ಇತ್ತು
vii) ಇಬ್ರೂ ಒಬ್ಬಾಕಿ ಮ್ಯಾಲೆ ಮನಸ್ ಇಟ್ಟಿದ್ರು

---

5. ಹೀಗಿರುವಾಗ ಅಮಹತ್ ವರ್ಗದ ಕರ್ತೃ ಪದಗಳಿಗೆ ಬಹುವಚನ ಪ್ರತ್ಯಯ ಹತ್ತಲಾರದೆ ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ. 'ಗಳ್' (ಗಳು) ಅಥವಾ ಅದರ ಆಡು ರೂಪ 'ಗೊಳು' ವಿರಳವಾಗಿ ಬಳಕೆಯಾಗುತ್ತದೆ ಎನ್ನಬಹುದು. ಈ 'ಗಳ್' ಬಹುವಚನ ಪ್ರತ್ಯಯ ಬಹು ಹಿಂದೆ (?) ಮಹತ್, ಅಮಹತ್ ವರ್ಗ ಎಂಬ ಭೇದವಿರದೆ ಎಲ್ಲವಕ್ಕೂ ಅನ್ವಯಿಸಿ ಪ್ರಯೋಗಗೊಳ್ಳುವ ಏಕೈಕ ಪ್ರತ್ಯಯವಾಗಿದ್ದಿತು. ಈ ಬಗ್ಗೆ ಇನ್ನಷ್ಟು ಹೆಚ್ಚಿನ ವಿವರಗಳಿಗೆ ಗಮನಿಸಿ.— –ನನ್ನ ಲೇಖನ 'ಗಳ್: ಬಹುವಚನ ಪ್ರತ್ಯಯ-ಒಂದು ಟಿಪ್ಪಣಿ' 'ಸಾಧನೆ' ಸಂ-17, ಸಂ: 3-4, ಜುಲೈ-ಡಿಸೆಂ., 1988.

6. ನಾಲ್ಕಾರು ದಶಕಗಳ ಹಿಂದೆ ಅನಕ್ಷರಸ್ಥರು ಅದರಲ್ಲೂ ಮೊಸರು ಹಾಲು ಮಾರಾಟ ಮಾಡುವ ಹೆಣ್ಣುಮಕ್ಕಳು (ಮತ್ತು ಇತರೆ ಮಹಿಳೆಯರು ಸಹ) ತಮ್ಮದೇ ಆದ ಎಣಿಕೆಕ್ರಮವಾಗಿ ನಾಲ್ಕಿಪ್ಪತ್ತು (4 × 20 = 80), ಮೂರಿಪ್ಪತ್ತು (3 × 20 = 60), ಹತ್ತಿಪ್ಪತ್ತು (10 × 20 = 200) ಎಂಬುದಾಗಿ ಲೆಕ್ಕವನ್ನು ಇಟ್ಟುಕೊಳ್ಳುತ್ತಿದ್ದರೆಂದು ಮುದುಕಿಯರು ಹೇಳುವುದುಂಟು.

ಇಲ್ಲಿಯ ಮಹತ್ ವರ್ಗದ ಕರ್ತೃಪದವು ಸ್ವಸ್ವರೂಪದಲ್ಲೇ ಕ್ರಿಯೆಯನ್ನಾಧರಿಸಿ ಏಕವಚನ ಇಲ್ಲವೆ ಬಹುವಚನ ಸೂಚಿಯಾಗಿ ನಿಲ್ಲಬಲ್ಲುದು. ಆದರೆ ಮಹತ್ ವರ್ಗದ ವಾಕ್ಯರಚನೆಯ ವ್ಯವಸ್ಥೆಯಂತೆ ಕ್ರಿಯೆ ಮತ್ತು ಕರ್ತೃಗಳೆರಡಕ್ಕೆ ಸಂಬಂಧಿಸಿದಂತೆ ವಚನ ಮತ್ತು ಲಿಂಗ ಎರಡರಲ್ಲೂ ಸಮಾನಾಂಶಗಳ ಅನ್ವಿತಿ ಕಂಡುಬರುತ್ತದೆ. ಇದನ್ನನುಸರಿಸಿಯೆ ಅಮಹತ್ ವರ್ಗದ ಕ್ರಿಯಾಪದ ಬಹುವಚನದಲ್ಲಿದ್ದಾಗ ಏಕವಚನದಲ್ಲಿರುವ ಕರ್ತೃವಿಗೆ 'ಗಳ್' ಪ್ರತ್ಯಯ ಸೇರಿಸಿ ನೋಡುವ ಪ್ರಕ್ರಿಯೆ ಬೆಳೆದಂತೆ ತೋರುತ್ತದೆ[7]. ಇದರಿಂದ 'ಗಳ್' ಪ್ರತ್ಯಯ ಹತ್ತಿಸಲಿ ಬಿಡಲಿ ಒಟ್ಟಾರೆ ಆ ಎರಡೂ ರೂಪಗಳು ಸಾಧುವಾದ ಪ್ರಯೋಗವಾಗಿ ಉಳಿಯುತ್ತವೆ. ಆದರೂ ಈ ಕ್ರಮವು ಬಹಳವಾಗಿ ಪ್ರಜ್ಞಾಪೂರ್ವಕವಾಗಿ ನಡೆಯುವಂಥದ್ದೆ–ಎಂದು ಹೇಳಬೇಕು. ಕೆಲವೊಮ್ಮೆ (ಶಿಷ್ಟಭಾಷಾ ಪ್ರಯೋಗಗಳಲ್ಲಿ) ಅಮೂರ್ತ ಅಥವಾ ಭಾವ ಸನ್ನಿವೇಶಗಳಿಗೆ ಅನ್ವಯಿಸಿ ಈ ಬಹುವಚನ ಪ್ರತ್ಯಯ ಪ್ರಯೋಗಗೊಳ್ಳುವುದನ್ನು ಗಮನಿಸಿದರೆ, ಇದು ಒಂದಿಷ್ಟು ಕೃತಕ ಬಳಕೆಯಾಗಿಯೇ ತೋರುತ್ತದೆ. ಕೇಶಿರಾಜ ಕೊಡುವ (i) ಮನಂಗಳ್ ಸಂಚಲಂಗಳಾದುವು' (148) (ii) ಕುರುಳ್ಗಳ ಕರ್ಪುಗಳ್, ಪೂಗಳ ಬೆಳ್ಪುಗಳ್ (150)–ಇತ್ಯಾದಿ ಉದಾಹರಣೆಗಳು ಸ್ಪಷ್ಟವಾಗಿ ಈ ರೀತಿಯಲ್ಲೇ ಕಂಡುಬರುತ್ತವೆ. □

---

7. ಇದು ಕೇವಲ ಊಹೆಯ ಮಟ್ಟದಲ್ಲಿ ಮಾಡಿದಂಥದ್ದಾಗಿದೆ. ಹೀಗಾದಾಗ ಅಮಹತ್ ವರ್ಗದಲ್ಲಿ 'ಗಳ್' ಪ್ರತ್ಯಯದ ಸ್ಥಾನವೇನು ಎಂಬ ಪ್ರಶ್ನೆ ಉದ್ಭವಿಸುತ್ತದೆ.

# ಗ್ರಂಥ ವಿಮರ್ಶೆ

**ಕನ್ನಡ—ಕನ್ನಡ ಸುವರ್ಣ ಕೋಶ :**

**ಗಮಕಿ ಆರ್. ಶಂಕರನಾರಾಯಣ್**

ಕರ್ನಾಟಕದ ಪ್ರಾಂತ ಭಾಷೆಯಾಗಿ, ಕೋಟಿ ಕೋಟಿ ಕನ್ನಡಿಗರಿಗೆ ತಾಯ್ನುಡಿಯಾಗಿ, ಸಾಹಿತ್ಯಭಾಷೆಯೂ ಆಗಿರುವ ಕನ್ನಡಕ್ಕೆ ಹೊಸ ಕೊಡುಗೆಯಾಗಿ ಈ ಸುವರ್ಣ ಕೋಶ ಇದೀಗ ಹೊರಬಂದಿದೆ. ಭಾಷೆಯ ಬೋಧನೆ, ಅಧ್ಯಯನ ಮತ್ತು ಪ್ರಯೋಗಗಳು ಯಶಸ್ವಿಯಾಗಬೇಕಾದರೆ ಶಬ್ದಕೋಶ ಅವಶ್ಯವಾಗುತ್ತದೆ. ಅಂತಹ ಶಬ್ದಕೋಶ ಎಷ್ಟಿದ್ದರೂ ಸಾಲದು. ಆದರೆ ದೋಷಮುಕ್ತವಾಗಿರಬೇಕಾದುದು ಅಪೇಕ್ಷಣೀಯ.

ಈ ಸುವರ್ಣ ಕೋಶದ ವೈಶಿಷ್ಟ್ಯವನ್ನು ಹಾಗೂ ಅತಿಶಯಗಳನ್ನು ಎದುರು ಪುಟದಲ್ಲಿ ಹಾಗೂ ಹಿಂಪುಟದಲ್ಲಿ? ಸುಟ್ಟಿ ತೋರಿಸಲಾಗಿದೆ. ಅದರಂತೆ ಈ ಕೋಶದಲ್ಲಿ ದೇಸಿ, ಸಮಸಂಸ್ಕೃತ, ತದ್ಭವ ಶಬ್ದಗಳಲ್ಲದೆ, ಪರಿಮಿತ ಅನ್ಯದೇಸಿಶಬ್ದಗಳೂ ಒಳಗೊಂಡಿವೆ. ಅನ್ಯದೇಸಿಗೆ (ಅ) ಎಂಬ ಸೂಚನೆಯಿದೆ. ಸಂಸ್ಕೃತದ ತದ್ಭವವಾಗಿದ್ದರೆ (ದ್ಭ) ಎಂತಲೂ ತದ್ಭವದ ಸಮಸಂಸ್ಕೃತ ಅಥವಾ ಸಂಸ್ಕೃತ ರೂಪವಾಗಿದ್ದರೆ (ಸಂ) ಎಂತಲೂ ಕಾಣಿಸಿರುವುದು ಕಂಡುಬರುತ್ತದೆ. ಹಳಗನ್ನಡದ ಱ ೞ ಮತ್ತು ಶಕಟರೇಫವನ್ನು ಬಳಸಿಲ್ಲ.

'ಶಬ್ದಪಾರಮಾರ್ಗಮಶಕ್ಯಂ' ಎಂಬುದು ಕೇಶಿರಾಜನ ಮಾತು. ಯಾವ ಶಬ್ದಕೋಶವೇ ಇರಲಿ. ಎಂತಹ ಬೃಹನ್ನಿಘಂಟುವೇ ಬಂದಿರಲಿ. ಅದಕ್ಕೆ ಹೊರಗುಳಿದ ಶಬ್ದಗಳು ಇದ್ದೇ ಇರುತ್ತವೆ. ಈ ಶಬ್ದಕೋಶದ ಪರಿಮಿತಿಯನ್ನು ಲೇಖಕರು ಹೇಳಿಕೊಂಡಿದ್ದಾರೆ. ಇದರಲ್ಲಿ ಸುಮಾರು ಹನ್ನೆರಡು ಸಾವಿರ ಶಬ್ದಗಳಿಗೆ ಅರ್ಥವನ್ನು ಕೊಡಲಾಗಿದೆ. ಸಾಮಾನ್ಯವಾಗಿ ಗೊತ್ತಿರುವಂತಹ ಕನ್ನಡ-ಸಂಸ್ಕೃತ ಶಬ್ದಗಳನ್ನು ಇದರಲ್ಲಿ ಕೈಬಿಡಲಾಗಿದೆ. ಪ್ರಸಿದ್ಧಾರ್ಥವಲ್ಲದೆ ಅನ್ಯಾರ್ಥವಿದ್ದಲ್ಲಿ ಅದನ್ನು ಉಳಿಸಿಕೊಂಡು ಅರ್ಥವನ್ನು ಕೊಟ್ಟಿರುವುದುಂಟು. ಶಬ್ದಗಳ ಅಕಾರಾದ್ಯನುಕ್ರಮದಲ್ಲಿ ಆದ್ಯಕ್ಷರದ ಚಾಕ್ಷುಷ ರೂಪವನ್ನು ಅನುಲಕ್ಷಿಸಿರುವುದು ಕಂಡುಬರುತ್ತದೆ. ಕೋಶವನ್ನು ಬಳಸುವವರಿಗೆ ಇದು ಸುಕರವೆಂದು ಭಾವಿಸಲಾಗಿದೆ. ಶಬ್ದಗಳನ್ನು, ಅವಕ್ಕೆ ಪರ್ಯಾಯ ರೂಪವಿದ್ದರೆ ಅದನ್ನು ಕೂಡ ದಪ್ಪದ ಅಕ್ಷರದಲ್ಲಿ ಕಾಣಿಸಿದೆ. ಇತರ ಅನೇಕ ಕನ್ನಡ ಶಬ್ದಕೋಶಗಳನ್ನು ಪ್ರವೇಶಿಸದಿರುವ ಅನೇಕ ದೇಸಿಯ ಶಬ್ದಗಳು ಇದರಲ್ಲಿದ್ದು, ಅವುಗಳಿಗೆ ಅರ್ಥವನ್ನು ಕೊಡಲಾಗಿದೆ. ಈ ಶಬ್ದಕೋಶವನ್ನು ಇದೇ ಮಟ್ಟದ ಇತರ

ಕನ್ನಡ ಶಬ್ದಕೋಶಗಳ ಜೊತೆಗೆ ತೆರೆದಿಟ್ಟು ಸಮೀಕ್ಷಿಸಿದರೆ ಇದರ ಹೆಚ್ಚಳವೇನೆಂಬುದು ವೇದ್ಯವಾಗುತ್ತದೆ. ಈ ಕೋಶಕ್ಕೆ ಯಾವುದೇ ಮುನ್ನುಡಿ ಇಲ್ಲವಾದರೂ ಲೇಖಕರು ತಮ್ಮ ಅರಿಕೆಯಲ್ಲಿ ಇತರ ಆಧುನಿಕ ಕೋಶಗಳನ್ನೆಲ್ಲ ಉಲ್ಲೇಖಿಸಿ ಈ ಸುವರ್ಣಕೋಶದ ನೆಲೆ ಬೆಲೆಗಳನ್ನು ಮನಗಾಣುವಂತೆ ಮಾಡಿರುತ್ತಾರೆ.

ಇತರ ಯಾವುದೇ ಶಬ್ದಕೋಶ ರಚನೆಯಲ್ಲಿ ಲಕ್ಷಿಸಲಾಗದಿರುವ ಕಾಗುಣಿತದ ಶುದ್ಧತೆಯನ್ನು ನಾವು ಇದರಲ್ಲಿ ಕಾಣುತ್ತೇವೆ. ಉದಾ : ಮಕಾರ ಯಕಾರಗಳಲ್ಲಿ ಅತ್ವ, ಈತ್ವ, ಊತ್ವ, ಓತ್ವಗಳ ಶುದ್ಧರೂಪದ ಬಳಕೆ ಇದರಲ್ಲಿದೆ. ಹಾಗೆಯೇ ಅರ್ಕಾರದ ಒತ್ತಿನ ಶುದ್ಧವಾದ ಬಳಕೆಯನ್ನು ಕಾಣಬಲ್ಲೆವು. ಯಾವುದೇ ಶಬ್ದಕೋಶದ ಗುರಿ ಯಾವ ಶಬ್ದಕ್ಕೆ ಯಾವ ಅರ್ಥನೆಂಬುದನ್ನು ತಿಳಿಸಿದರೆ, ಕೆಲವರಿಗೆ ಸಾಕಾಗಬಹುದು, ಎಲ್ಲರಿಗೂ ಸಾಲದು. ಆಯಾ ಶಬ್ದರೂಪದ ಅಕ್ಷರ ರೂಪಗಳೂ ಗೊತ್ತಾಗಬೇಕೆಂಬುದನ್ನು ಇದರಲ್ಲಿ ಸಂಲಕ್ಷಿಸಿರುವುದು ಮೆಚ್ಚತಕ್ಕ ವಿಷಯ. ನಾವು ಇಂಗ್ಲಿಷ್ ಶಬ್ದ ಕೋಶವನ್ನು ಆಯಾ ಶಬ್ದದ ಅಕ್ಷರಾಂತರ್ಗತಿ (Spelling) ಹೇಗೆಂಬುದನ್ನು ತಿಳಿಯಲಿಕ್ಕಾಗಿ ನೋಡುವೆವಲ್ಲವೆ? ಹಾಗೆಯೇ ಕನ್ನಡದ ನಿಘಂಟುಗಳಲ್ಲಿ ಆಯಾ ಶಬ್ದಾಂತರ್ಗತವಾದ ಕಾಗುಣಿತದ ಶುದ್ಧತೆಯನ್ನು ತಿಳಿಯುವ ಲಕ್ಷ್ಯ ಬೇಡವೆ ? ಈ ಉದ್ದೇಶವನ್ನು ಈ ಕೋಶದ ರಚನೆಯಲ್ಲಿ ಅನುಲಕ್ಷಿಸಿರುವುದು ಮೆಚ್ಚಬೇಕಾದ ಸಂಗತಿ.

ಈ ಸುವರ್ಣ ಕೋಶವು ಓರ್ವ ವ್ಯಕ್ತಿಯ ಏಕಾಂಗೀ ಶ್ರಮದ ಫಲವಾಗಿರುತ್ತದೆ. ಹಾಗೆನ್ನುವಾಗ ಎಲ್ಲರೂ ಇಂತಹ ಕೋಶ ರಚನೆ ಮಾಡಬಲ್ಲರೆಂದು ಅರ್ಥವಲ್ಲ. ಇದನ್ನು ರಚಿಸಿದವರು ಬಹು ಭಾಷಾಪರಿಣತರು, ಖ್ಯಾತ ಲೇಖಕರು, ಸಂಶೋಧಕರು ಮತ್ತು ಕವಿಗಳೂ ಆದ ಪ್ರೊ. ಟಿ. ಕೇಶವ ಭಟ್ಟರು. ಇವರು ಕನ್ನಡ ಎಂ. ಎ. ಮಾತ್ರವಲ್ಲದೆ, ಕನ್ನಡ–ಸಂಸ್ಕೃತ ವಿದ್ವಾನ್ ಪದವೀಧರು, ಹಿಂದೀ ವಿಶಾರದರು. ಕನ್ನಡ ಅಧ್ಯಾಪನವನ್ನೇ ಉದ್ಯೋಗ ಮಾಡಿದವರು. ತುಳು ನಾಡಿನವರಾಗಿದ್ದು, ತುಳು ಭಾಷೆ, ಹವ್ಯಕ ಉಪಭಾಷೆಗಳನ್ನು ಬಲ್ಲವರು. ಶಬ್ದಕೋಶ ರಚನೆಗೆ ತಕ್ಕ ಅರ್ಹತೆಯುಳ್ಳವರೆಂಬುದು ಸುನಿಶ್ಚಯ.

ಈ ಸುವರ್ಣಕೋಶವು ಸಾರ್ಥಕವಾದ ಹೆಸರನ್ನು ತಾಳಿದೆ. ಕಂಪ್ಯೂಟರ್ ಅಚ್ಚು ಮುದ್ರಣವಾಗಿದೆ. ಉತ್ತಮವಾದ ಕಾಗದದ ಬಳಕೆಯಿಂದ, ತಪ್ಪಿಲ್ಲದ ಮುದ್ರಣದಿಂದ ಅಂದವಡೆದಿದೆ. ಇದನ್ನು ರಚಿಸಿದವರು ಮತ್ತು ಇದರ ಪ್ರಕಾಶಕರು ಕನ್ನಡಿಗರೆಲ್ಲರ ಅಭಿನಂದನೆಗೆ ಪಾತ್ರರು.

---

ಲೇ : ಪ್ರೊ. ಟಿ. ಕೇಶವ ಭಟ್ಟ, ಪ್ರ : ವಾಸನ್ ಬುಕ್ ಡಿಪೋ, 1ನೇ ಅಡ್ಡರಸ್ತೆ ಗಾಂಧಿನಗರ, ಬೆಂಗಳೂರು 560 009, ಪುಟಗಳು : (ಅಷ್ಟದಳ ಕಿರೀಟ) 256,
ಬೆಲೆ : ಸಾದಾ ಪ್ರತಿ ರೂ : 35-00 ಉತ್ತಮ ಪ್ರತಿ : ರೂ. 45·00

# ಶ್ರೀಶಂಕರಬೋಧಾಮೃತ

ಎನ್. ರಂಗನಾಥಶರ್ಮ

ಸಂಸ್ಕೃತದಲ್ಲಿ ಸ್ತೋತ್ರಸಾಹಿತ್ಯವು ವಿಪುಲವಾಗಿ ಬೆಳೆದಿದೆ. ದೈವಭಕ್ತಿ ಬಹು ದೊಡ್ಡದೆಂದು ನಂಬಿದ ಭರತಭೂಮಿಯಲ್ಲಿ ಇದು ಸಹಜವಾದ ಬೆಳವಣಿಗೆ. ಅಂತೆಯೇ ಎಲ್ಲ ದೇಶಭಾಷೆಗಳಲ್ಲಿಯೂ ಕವಿಗಳು ನಾನಾವಿಧದಲ್ಲಿ ತಮ್ಮ ಇಷ್ಟ ದೇವತೆಗಳನ್ನು ಸ್ತುತಿಸಿ ಮನಃಶಾಂತಿಯನ್ನು ಪಡೆದಿದ್ದಾರೆ. ಈ ಸ್ತೋತ್ರಗಳು ಬರಿಯ ಸ್ತುತಿಗಳಾಗಿರದೆ ರಮಣೀಯವಾದ ಕಾವ್ಯರೂಪವನ್ನು ಪಡೆದಿರುತ್ತವೆ. ಇವನ್ನು ಸ್ತೋತ್ರಕಾವ್ಯಗಳೆನ್ನ ಬಹುದು. ಜೈನ, ಬೌದ್ಧ ಸಾಹಿತ್ಯದಲ್ಲಿಯೂ ಇವು ಸಂಪುಷ್ಟವಾಗಿ ದೊರೆಯುತ್ತವೆ.

ಋಗ್ವೇದವೇ ಸ್ತೋತ್ರಮಯ ಸೂಕ್ತಗಳಿಂದ ತುಂಬಿದೆ. ಕಾಳಿದಾಸ, ಶ್ರೀಹರ್ಷಾದಿ ಮಹಾಕವಿಗಳ ಕಾವ್ಯಗಳಲ್ಲಿ ಸಂದರ್ಭೋಚಿತವಾಗಿ ಸ್ತೋತ್ರಗಳು ಬಂದಿವೆ. ಮಯೂರ ಕವಿಯ ಸೂರ್ಯಶತಕ, ಪುಷ್ಪದಂತನ ಶಿವಮಹಿಮ್ನಃ ಸ್ತೋತ್ರ. ಕುಲಶೇಖರ ಕವಿಯ ಮುಕುಂದ ಮಾಲೆ, ಮೂಕಕವಿಯ ಪಂಚಶತಿ, ಜಗನ್ನಾಥ ಪಂಡಿತನ ಗಂಗಾಲಹರೀ ಮೊದಲಾದ ಪಂಚಲಹರಿಗಳು ಶಬ್ದಾಲಂಕಾರ, ಅರ್ಥಾಲಂಕಾರ ಗಳಿಂದ ಸಂಪುಷ್ಟವಾಗಿ ಭಕ್ತಿರಸಪ್ರವಾಹವನ್ನು ಹರಿಸಿರುವ ಉತ್ತಮ ಕಾವ್ಯಗಳು. ಶ್ರೀ ಶಂಕರಭಗವತ್ಪಾದರ ಹೆಸರಿನಲ್ಲಿ ಪ್ರಸಿದ್ಧವಾಗಿರುವ ಸೌಂದರ್ಯಲಹರೀ, ಭಜಗೋವಿಂದ ಮೊದಲಾದವು ವೇದಾಂತತತ್ತ್ವಗಳನ್ನಳವಡಿಸಿಕೊಂಡಿರುವ ಶ್ರೇಷ್ಠಪಂಕ್ತಿಯ ಸ್ತೋತ್ರ ಕಾವ್ಯಗಳೇ ಆಗಿವೆ.

ಭಗವತ್ಪಾದರ ರಚನೆಗಳಲ್ಲಿ ಇನ್ನೊಂದು ವೈಶಿಷ್ಟ್ಯವಿದೆ. ತತ್ತ್ವೋಪದೇಶದ ಜೊತೆಗೆ ವಿಷಯಗಳ ಸರಳತೆ, ಲಲಿತಪದಬಂಧ, ಅನಾಯಾಸವಾಗಿ ಹರಿದುಬರುವ ಶಬ್ದಾಲಂಕಾರ, ಅತ್ಯಂತ ಸಮುಚಿತವಾದ ಉಪಮಾದಿಗಳು, ಲಯಬದ್ಧವಾದ ಪದಗಳ ಜೋಡಣೆ-ಇವು ಸ್ತೋತ್ರಗಳಿಗೆ ಅಪೂರ್ವ ಶೋಭೆಯನ್ನು ತಂದಿವೆ. ಇಂತಹ ಸ್ತೋತ್ರ ರಚನೆಗಳಲ್ಲೊಂದಾದ ಶಿವಾನಂದಲಹರಿಯು ಈಗ ಕನ್ನಡದ ವಾರ್ಧಕಷಟ್ಪದಿಯ ರೂಪ ದಲ್ಲಿ ಸುಂದರವಾಗಿ ಮೈದಳೆದು ಪ್ರಕಾಶಗೊಂಡಿದೆ. ಜೊತೆಗೆ ಆಚಾರ್ಯರ ಮೋಹಮುದ್ಗರ ವೆಂಬ ಭಜಗೋವಿಂದ ಸ್ತೋತ್ರವನ್ನು ಒಳಗೊಂಡು ಶ್ರೀಶಂಕರಬೋಧಾಮೃತವಾಗಿ ಪರಿಣಮಿಸಿದೆ. ಈ ಅಮೃತವನ್ನು ಕನ್ನಡಿಗರಿಗೆ ನೀಡಿದವರು ಸುಪ್ರಸಿದ್ಧಗಮಕಿಗಳಾದ ಶ್ರೀ ಆರ್. ಶಂಕರನಾರಾಯಣ್ ಅವರು.

ಭಗವತ್ಪಾದರ ಶಿವಾನಂದಲಹರಿಯಾದರೋ ನಾನಾವೃತ್ತಗಳನ್ನೊಳಗೊಂಡಿದೆ. ಶಿಖರಿಣೀ, ಶಾರ್ದೂಲವಿಕ್ರೀಡಿತಗಳು ಅಧಿಕವಾಗಿವೆ. ದ್ರುತವಿಲಂಬಿತ, ವಸಂತತಿಲಕ

ಗಳೂ ಬಂದಿವೆ. ಸ್ತೋತ್ರಗ್ರಂಥಗಳಲ್ಲಿ ವಿರಳವಾಗಿ ಇದ್ದಿರಬಹುದಾದ ಶಾಲಿನೀ, ಮಾಲ ಭಾರಿಣಿಗಳೂ ಇವೆ. ಭಕ್ತಿಯ ಆವೇಶದಲ್ಲಿ ಉಕ್ಕುವ ಭಾವಗಳಿಗೆ, ವಿವಿಧ ಕಲ್ಪನೆಗಳಿಗೆ ತಕ್ಕ ವೃತ್ತಗಳು ತಾವಾಗಿಯೇ ನುಗ್ಗಿಬಂದಿವೆಯೇ ಹೊರತು ಆಚಾರ್ಯರು ಯಾವ ವೃತ್ತವನ್ನೂ ಬೇಕೆಂದು ಆರಿಸಿಕೊಂಡಂತೆ ಕಾಣುವುದಿಲ್ಲ. ಮೇಲಿಂದ ಮೇಲೆ ಬರುವ ಉಪಮೆಗಳಸರಣಿ ನೃತ್ಯಮಾಡುವಂತಿರುವ ವರ್ಣವಿನ್ಯಾಸಗಳು ಓದುಗರನ್ನು ಮುಗ್ಧರನ್ನಾಗಿ ಮಾಡಿಬಿಡುತ್ತವೆ.

ಹೀಗೆ ಈ ಸ್ತೋತ್ರದಿಂದ ಮುಗ್ಧರಾದ ಅನುವಾದಕರು ಈ ಸಂಸ್ಕೃತ ಸ್ತೋತ್ರ ಕದಂಬವನ್ನು ಕನ್ನಡಕ್ಕೆ ಪರಿವರ್ತಿಸಲು ಉದ್ದೇಶಿಸಿದ್ದೇ ಅವರ ರಸಜ್ಞತೆಗೆ ಹೆಗ್ಗುರುತು. ಅನುಗುಣವಾದ ವಾರ್ಧಕ ಷಟ್ಪದಿಯನ್ನು ಆರಿಸಿಕೊಂಡದ್ದು ಅವರ ಪದ್ಯರಚನಾ ಸಾಮರ್ಥ್ಯಕ್ಕೆ ಸಾಕ್ಷಿ. ವಾರ್ಧಕಷಟ್ಪದಿ ಸುಲಭವಾಗಿ ಎಲ್ಲರಿಗೂ ಒಲಿಯುವುದಿಲ್ಲ. ಶ್ರೀ ಶಂಕರನಾರಾಯಣ್ ಅವರು ಈ ಷಟ್ಪದಿಯಲ್ಲಿ ತುಂಬ ಜಾಣ್ಮೆಯನ್ನು ಪ್ರದರ್ಶಿಸಿ ಯಶಸ್ವಿಯಾಗಿದ್ದಾರೆ. ಇದನ್ನು ಓದುತ್ತಿರುವಾಗ ಸಂಸ್ಕೃತ ಮೂಲವನ್ನೇ ಓದಿದಷ್ಟು ಆನಂದವಾಗುತ್ತದೆ. ಹಳೆಗನ್ನಡ ನಡುಗನ್ನಡಗಳ ಮಿಶ್ರಣ ಮನೋಜ್ಞವಾಗಿ ಬಂದಿದೆ. ಗಮಕವಾಚನಕ್ಕೆ ಚೆನ್ನಾಗಿ ಒಗ್ಗುವ ಶೈಲಿಯನ್ನಿಲ್ಲಿ ಕಾಣಬಹುದು. ಭಕ್ತಜನರು ನಿತ್ಯಪಾರಾಯಣಕ್ಕೆ ಸಹ ಬಳಸಬಹುದು. ಅನುವಾದವು ಎಷ್ಟು ಸಹಜವಾಗಿ ಬಂದಿದೆ ಯೆನ್ನುವುದಕ್ಕೆ ಎರಡು ಉದಾಹರಣೆಗಳನ್ನು ಕೊಡಬಹುದು.

ಮೂಲ–

ಅಂಕೋಲಂ ನಿಜಬೀಜಸಂತತಿರಯಸ್ಕಾಂತೋಪಲಂ ಸೂಚಿಕಾ
ಸಾಧ್ವೀ ನೈಜವಿಭುಂ ಲತಾ ಕ್ಷಿತಿರುಹಂ ಸಿಂಧುಃ ಸರಿದ್ವಲ್ಲಭಮ್ ।
ಪ್ರಾಪ್ನೋತೀಹ ಯಥಾ ತಥಾ ಪಶುಪತೇಃ ಪಾದಾರವಿಂದದ್ವಯಂ
ಚೇತೋವೃತ್ತಿರುಪೇತ್ಯ ತಿಷ್ಠತಿ ಸದಾ ಸಾ ಭಕ್ತಿರಿತ್ಯುಚ್ಯತೇ ॥

ಅನುವಾದ

ಜಗದೊಳಂಕೋಲವಂ ನಿಜಬೀಜಸಂತತಿಯು
ಮಿಗೆ ಸೂಜಿಗಳ ಸೂಜಿಗಲ್ಲಂ ಪತಿವ್ರತೆಯು
ಸೊಗದಿ ನಿಜಪತಿಯನಾ ಬಳ್ಳಿ ಭೂಜಾತವಂ ನದಿ ವಾಹಿನೀಪತಿಯನು ।
ಸೊಗಸಿಸಿಂದಾಶ್ರಯಿಪವೋಲ್ ಮನ್ಮನೋವೃತ್ತಿ
ಯೆಗಜಾತೆಯರಸ ಪಶುಪತಿಯ ಪದಕಮಲಯು
ಗ್ಮಗಳೊಳಾವಾಗಳುಂ ನೆಲೆ ನಿಂತೊಡದೆ ತಾನೆಭಕ್ತಿಯೆಂದೆನಿಪುದೈಸೆ ॥

ಮೂಲ–

ಸಿಸ್ತೃತ್ಯೇಪಜಸಿಂ ಮನೋಽಸ್ಯ ಕಠಿನಂ ತಸ್ಮಿನ್ನಟಾನೀತಿ ಮ-
ದ್ರಕ್ಷಾಯೈ ಗಿರಿಸೀಮ್ನಿ ಕೋಮಲಪದನ್ಯಾಸಃ ಪುರಾಭ್ಯಾಸಿತಃ ।
ನೋ ಚೇದ್ದಿವ್ಯಗೃಹಾಂತರೇಷು ಸುಮನಸ್ತಲ್ಪೇಷು ವೇದ್ಯಾದಿಷು
ಪ್ರಾಯಃ ಸತ್ಸು ಶಿಲಾತಲೇಷು ನಟನಂ ಶಂಭೋ ಕಿಮರ್ಥಂ ತವ॥

ಅನುವಾದ–

ಇವನನುದಿಸುವಂ ಮುಂದೆಯಿವನ ಮನವತಿಕಠಿನ
ಮಿವನ ಮನದೊಳಗಟನ ಮೆನ್ನ ಮೃದುಪದಕೆ ಸಂ–
ಭವಿಸಲಿದೆಯೆಂದು ಮದ್ರಕ್ಷೆಗಂ ಕತ್ತಿಯೇಂ ಬೆಟ್ಟದೆಡೆಯೊಳು ನಡೆಯುವ ।
ತವದಮ್ಮಗೇಹದೊಳು ಬಗೆಬಗೆಯ ಪುಷ್ಪಗಳ
ನಿವಹಂದಿದೆಸೆವ ಶಯ್ಯೆಯ ನಯದ ವೇದಿಯಿರೆ
ಬುವಿಯ ಶಿಲೆಯೊಳನಿಂದು ನರ್ತಿಸುತ್ತಿರ್ಪ ಪರಿಯೇತಕೆಂದಾನರಿವೆನೆ ॥

ಈ ಪದ್ಯಗಳು ಅನುವಾದದಂತೆ ಕಾಣಿಸದೆ, ಸಹಜವಾಗಿ ಮೂಡಿದ ನೂತನ ರಚನೆಗಳಂತೆ ಕಾಣಿಸುತ್ತವೆ. ಇವುಗಳ ಜೊತೆಗೆ ಶ್ರೀಶಂಕರರು ರಚಿಸಿದ ಮೋಹ ಮುದ್ಗರವನ್ನು ಆ ಸಂದರ್ಭದಲ್ಲಿ ಶಿಷ್ಯರು ಹೇಳಿದ ಕೆಲವು ಶ್ಲೋಕಗಳನ್ನು ಅನುವಾದ ಮಾಡಿ ಈ ಪುಸ್ತಕದಲ್ಲಿ ಸೇರಿಸಲಾಗಿದೆ. ಆದ್ದರಿಂದ ಶ್ರೀಶಂಕರಬೋಧಾಮೃತ ಎಂಬ ಹೆಸರು ಯುಕ್ತವಾಗಿದೆ. ಒಟ್ಟಿನಲ್ಲಿ ಕವಿತಾಶಕ್ತಿ, ರಸಜ್ಞತೆ, ಗಮಕಕಲೆ ಒಬ್ಬ ಪ್ರಾಜ್ಞನಲ್ಲಿ ತ್ರಿವಳಿಗೊಂಡು ಸೇರಿದಾಗ ಈ ಬಗೆಯ ಪದ್ಯಾನುವಾದ ಸಾಧ್ಯವಾಗುತ್ತದೆ. ಶ್ರೀ ಗಮಕಿ ಆರ್. ಶಂಕರನಾರಾಯಣ್ ಅವರಿಂದ ಇಂತಹ ಸ್ತೋತ್ರಗಳು ಇನ್ನೂ ಮೂಡಿಬರಲೆಂದು ಹಾರೈಸುತ್ತೇವೆ. 

ಅನು. : ಗಮಕಿ ಆರ್. ಶಂಕರನಾರಾಯಣ್
67, ಐ. ಟಿ. ಐ. ಲೇಔಟ್, ವಿದ್ಯಾಪೀಠ, ಬನಶಂಕರಿ 3ನೇ ಹಂತ,
ಬೆಂಗಳೂರು–560 085. ಪುಟ 18 + 42 ಬೆಲೆ : ರೂ. 20

## ಭಾಷಾದೀಪಿಕೆ

**ಡಾ|| ಶ್ರೀ ಕೃಷ್ಣಭಟ್ ಅರ್ತಿಕಜೆ**

ಸಾಹಿತ್ಯ ಹಾಗೂ ಶಿಕ್ಷಣ ಕ್ಷೇತ್ರಗಳಲ್ಲಿ ಪರಿಣತ ವಿದ್ವಾಂಸರಾದ ಪ್ರೊ. ಟಿ. ಕೇಶವಭಟ್ಟರು ವಿಮರ್ಶೆ, ಗ್ರಂಥ ಸಂಪಾದನೆ, ನಿಘಂಟು, ಕಾವ್ಯ, ಪ್ರಬಂಧ, ಸಂಶೋಧನೆಗಳಿಗೆ ಸಂಬಂಧಿಸಿದ 26ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇವರು ಅನೇಕ ಪ್ರಶಸ್ತಿಗಳನ್ನೂ ಗಳಿಸಿದ್ದಾರೆ. ವ್ಯಾಕರಣ, ಛಂದಸ್ಸು, ಅಲಂಕಾರ ಮುಂತಾದ ಶಾಸ್ತ್ರಗಳಲ್ಲಿರುವಂತೆಯೇ ಯಕ್ಷಗಾನ, ಶೋಭಾನೆ, ಗಮಕ, ಜಾನಪದ ಕಲಾಕ್ಷೇತ್ರ ಗಳಲ್ಲಿಯೂ ಇವರಿಗೆ ವಿಶೇಷ ಪರಿಣತಿಯಿದೆ.

ಪ್ರೊ. ಟಿ. ಕೇಶವಭಟ್ಟರ 'ಭಾಷಾದೀಪಿಕೆ'ಯು ವ್ಯಾಕರಣ, ಛಂದಸ್ಸು, ಅಲಂಕಾರ ಹಾಗೂ ಶುದ್ಧಾಶುದ್ಧತೆಯ ಸಮೀಕ್ಷೆಯನ್ನು ಕುರಿತು ಹೊಸಗನ್ನಡದಲ್ಲಿ ರಚಿತವಾದ ಒಂದು ಉಪಯುಕ್ತ ಕೃತಿ. ಕನ್ನಡ ಭಾಷಾ ಬೆಳವಣಿಗೆಯ ವಿವಿಧ ಹಂತಗಳಲ್ಲಿ ವ್ಯಾಕರಣಗ್ರಂಥಗಳು ರಚಿತವಾಗಿವೆ. ಆಧುನಿಕರಲ್ಲಿ ಕೆಲವರಿಗೆ ವ್ಯಾಕರಣಾದಿ ಶಾಸ್ತ್ರಗಳ ಬಗೆಗೆ ತಿರಸ್ಕಾರವಿದೆ. ಈ ರೀತಿ ವ್ಯಾಕರಣಾದಿ ಶಾಸ್ತ್ರಗಳನ್ನೆಲ್ಲ ಹೇಯವಾಗಿ ಎಣಿಸಿ ಕನ್ನಡವನ್ನು ಆಡುಮಾತಿಗೆ ಅಥವಾ ಗ್ರಾಮ್ಯಕ್ಕೆ ಇಳಿಸುವುದು ಸೂಕ್ತವಲ್ಲ ಎಂಬುದಾಗಿ ಅಭಿಪ್ರಾಯಪಟ್ಟ ಲೇಖಕರು ಅರಿಕೆಯಲ್ಲಿ "ವ್ಯಾಕರಣ, ಛಂದಸ್ಸು, ಅಲಂಕಾರಾದಿ ಶಾಸ್ತ್ರ ವಿಷಯಗಳು ಅನುಭವ ಪಾಂಡಿತ್ಯ ಸಭ್ಯತೆಗಳಲ್ಲಿ ಮುಂಬರಿವ ಯಾವುದೇ ಸಮಾಜದ ಸಾಹಿತ್ಯ ವೈಭವಕ್ಕೆ ಪೋಷಕಾಂಶಗಳಾಗಿವೆ. ಇವು ಎಂದಿಗೂ ಹಳಸುವಂಥವಲ್ಲ. ಮತ್ತೆ ಮತ್ತೆ ಹೊಸದಾಗಿ ಕಳೆಗೊಳ್ಳುವುವು" ಎಂದು ಹೇಳಿದ್ದಾರೆ.

ಭಾಷಾ ದೀಪಿಕೆಯಲ್ಲಿ ವ್ಯಾಕರಣ ವಿಭಾಗ, ಛಂದೋವಿಭಾಗ, ಅಲಂಕಾರ ವಿಭಾಗ ಮತ್ತು ಶುದ್ಧಾಶುದ್ಧತೆಯ ಸಮೀಕ್ಷಾ ವಿಭಾಗ ಎಂಬ ನಾಲ್ಕು ವಿಭಾಗ ಗಳಿವೆ. ಈ ವಿಭಾಗಗಳಲ್ಲೆಲ್ಲ ವ್ಯಾಕರಣ ವಿಭಾಗವು ದೀರ್ಘವಾಗಿಯೂ ವಿವರವಾಗಿಯೂ ಇದೆ. ಅಕ್ಷರ ಪ್ರಕರಣ, ಶಬ್ದಪ್ರಕರಣ, ವಾಕ್ಯಪ್ರಕರಣ ಎಂಬ ಉಪವಿಭಾಗಗಳಲ್ಲಿ ವ್ಯಾಕರಣದ ವಿವಿಧ ವಿಚಾರಗಳ ಲಕ್ಷಣ ಹಾಗೂ ಅವುಗಳಿಗೆ ಉಚಿತ ಉದಾಹರಣೆಗಳನ್ನು ಕೊಟ್ಟಿರುವುದಲ್ಲದೆ ವಿಶೇಷ ವಿವರಣೆಗಳನ್ನು ನೀಡಿ ಹೆಚ್ಚು ಸ್ಪಷ್ಟ ಪಡಿಸಿರುವುದು ಈ ಕೃತಿಯ ವೈಶಿಷ್ಟ್ಯ. ಛಂದೋ ವಿಭಾಗದಲ್ಲಿ ಗುರು, ಲಘು, ಮಾತ್ರೆ, ಗಣಗಳು, ಪ್ರಸ್ತಾರ, ರಗಳೆ, ಷಟ್ಪದಿ, ಖ್ಯಾತ ಕರ್ನಾಟಕ ವೃತ್ತಗಳು, ದ್ವಿಪದಿ, ಚೌಪದಿ, ಕಂದ,

ತ್ರಿಪದಿ, ಸಾಂಗತ್ಯ ಮುಂತಾದ ಛಂದೋಬಂಧಗಳ ಲಕ್ಷಣ ಹಾಗೂ ಉದಾಹರಣೆಗಳನ್ನು ಕೊಡಲಾಗಿದೆ. ಅಲಂಕಾರ ವಿಭಾಗದಲ್ಲಿ ಅನುಪ್ರಾಸ ಮತ್ತು ಯಮಕ ಎಂಬ ಶಬ್ದಾಲಂಕಾರಗಳ ಮತ್ತು ಅರ್ಥಾಲಂಕಾರಗಳಲ್ಲಿ ಜನಪ್ರಿಯವೂ ಮುಖ್ಯವೂ ಆದ ಹನ್ನೆರಡು ಅಲಂಕಾರಗಳ ಲಕ್ಷಣ, ಉದಾಹರಣೆ ಮತ್ತು ವಿಶೇಷ ವಿವರಣೆಯಿದೆ. ಶುದ್ಧಾಶುದ್ಧತೆಯ ಸಮೀಕ್ಷಾ ವಿಭಾಗ ಈ ಕೃತಿಯ ಇನ್ನೊಂದು ವಿಶಿಷ್ಟ ಅಂಶ. ಈ ವಿಭಾಗದಲ್ಲಿ ಪ್ರೊ|| ಭಟ್ಟರು ಶುದ್ಧತೆಯ ಕೆಲವು ಸಂದೇಹಗಳನ್ನು ನಿವಾರಿಸಿ, ವಾಕ್ಯಗಳಲ್ಲಿ ಹಾಗೂ ಶಬ್ದ ಪ್ರಯೋಗಗಳಲ್ಲಿ ಕೆಲವರು ಮಾಡುವ ತಪ್ಪುಗಳನ್ನು ಉದಾಹರಿಸಿ, ಅವುಗಳ ಶುದ್ಧರೂಪಗಳನ್ನು ನೀಡಿ ಸಹಕರಿಸಿದ್ದಾರೆ. ಅಂತೆಯೇ ಇವರು ನೀಡಿದ ಅಕ್ಷರಗಳ ಶುದ್ಧಾಶುದ್ಧ ರೂಪಗಳ ಪಟ್ಟಿ, ಅರಿಸಮಾಸ ಪದಗಳು ಮತ್ತು ಅವುಗಳ ನಿರ್ದೋಷ ರೂಪಗಳು, ಉಭಯಗ್ರಾಹ್ಯ ರೂಪಗಳು, ಸಂಸ್ಕೃತ ಶಬ್ದಗಳ ಹಾಗೂ ಕನ್ನಡ ಶಬ್ದಗಳ ಶುದ್ಧರೂಪಗಳ ಪಟ್ಟಿಮುಂತಾದುವು ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಅಧ್ಯಾಪಕರಿಗೂ ಪ್ರಯೋಜನಕಾರಿಯಾಗಿವೆ.

"ಕನ್ನಡದಲ್ಲಿ ವಿಶಿಷ್ಟತೆಯನ್ನು ಮುಂದುವರಿಸಲು ತನ್ಮೂಲಕ ಭಾಷೆಯನ್ನು ಅಭಿವೃದ್ಧಿ ಪಡಿಸಲು ಭಾಷೆಯಲ್ಲಿ ಅಭಿಮಾನವನ್ನೂ, ಜನಾದರವನ್ನೂ ಮೂಡಿಸಲು, ಉತ್ತಮ ಸಾಹಿತ್ಯಕೃತಿಗಳು ಮತ್ತು ಲಕ್ಷಣ ಕೃತಿಗಳು ಕನ್ನಡದಲ್ಲಿ ಹುಟ್ಟಿಬರಲು ಈ ಭಾಷಾ ದೀಪಿಕೆ ಪ್ರೇರಕವಾಗುವುದೆಂದು ಭಾವಿಸುತ್ತೇನೆ". "ಇದು ಭಾಷಾಧ್ಯಯನದ ದಾರಿಗತ್ತಲೆಗೆ ಕೈದೀವಿಗೆಯಾಗುವುದೆಂದು ಎಣಿಸುತ್ತೇನೆ" ಎಂದು ಹೇಳಿದ ಲೇಖಕರ ಮಾತುಗಳಿಗೆ ನಾವೂ ದನಿಗೂಡಿಸಬಹುದು. ಇದು ಕನ್ನಡ ಬಲ್ಲ ಎಲ್ಲರೂ ಕೊಂಡು ಉಪಯೋಗಿಸಬೇಕಾದ ಒಂದು ಉತ್ತಮ ಕೃತಿಯೆಂಬುದರಲ್ಲಿ ಸಂದೇಹವಿಲ್ಲ. □

---

ಟಿ. ಕೇಶವಭಟ್ಟ, 1993, ಎರಡನೇ ಮುದ್ರಣ. ಪ್ರಕಟಣೆ–ಶಾರದಾ ಪ್ರಕಾಶನ, ಗಾಂಧಿನಗರ ಬೆಂಗಳೂರು. ಪುಟ. 184, ಬೆಲೆ : 15/–

# ವಸ್ತು ಸಂಗ್ರಹ

## ೧. ಸಮ್ಮೇಳನ ಮತ್ತು ವಿಚಾರ ಗೋಷ್ಠಿಗಳು

8-7-94ರಂದು ಸೊಂಡೂರಿನ ಆದರ್ಶ ಸಮುದಾಯ ಭವನದಲ್ಲಿ ಇತಿಹಾಸ ಅಕಾಡೆಮಿಯ 8ನೆಯ ವಾರ್ಷಿಕ ಸಮ್ಮೇಳನ ಜರುಗಿತು. ಶ್ರೀ ಎಂ. ವೈ. ಘೋರ್ಪಡೆ ಎಂ. ಎಲ್. ಎ. ಅವರಿಂದ ಉದ್ಘಾಟನೆ, ಡಾ|| ಎ. ವಿ. ನರಸಿಂಹಮೂರ್ತಿ ಅವರಿಂದ "ಇತಿಹಾಸದರ್ಶನ" 9ನೇ ಸಂಪುಟದ ಬಿಡುಗಡೆ. ಪ್ರೊ|| ಎ. ಎಂ. ಕಲ್ಬುರ್ಗಿ ಅವರು ಅಧ್ಯಕ್ಷತೆ ವಹಿಸಿದ್ದರು.

21–8–94ರಂದು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರಿನಲ್ಲಿ ಶ್ರೇಷ್ಠ ಸಂಶೋಧಕ ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರಿಗಳ 61ನೆಯ ಹುಟ್ಟುಹಬ್ಬದ ಕಾರ್ಯಕ್ರಮವಾಗಿ ವಿಚಾರ ಸಂಕಿರಣ, ಸಂವಾದ, ಸನ್ಮಾನಗಳು ಜರುಗಿದವು. ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರು ಸನ್ಮಾನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

28–8–94ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಸಂಭಾಗಣದಲ್ಲಿ ಶ್ರೇಷ್ಠ ಸಂಶೋಧಕ ಮತ್ತು ಸಾಹಿತಿ ಡಾ|| ಎಚ್. ಎಂ. ಮರುಳ ಸಿದ್ಧಯ್ಯ ಅವರಿಗೆ ಸನ್ಮಾನ ಸಮಾರಂಭ ನಡೆಯಿತು. ಇದರ ಅಂಗವಾಗಿ ಸಾಮಾಜಿಕ ಬದಲಾವಣೆ ಮತ್ತು ಸಮಾಜ ಕಾರ್ಯ ಎಂಬ ವಿಷಯದ ಮೇಲೆ ವಿಚಾರಗೋಷ್ಠಿ ನಡೆಸಲಾಯಿತು. ಡಾ|| ಡಿ. ಎಂ. ನಂಜುಂಡಪ್ಪ, ನಿವೃತ್ತ ಕುಲಪತಿಗಳು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

26-9-94ರಂದು ಬೆಂಗಳೂರಿನ ಭಾರತೀಯ ವಿದ್ಯಾಭವನದಲ್ಲಿ ಶ್ರೀರಂಗ (೯೦) ನಮನ ಕಾರ್ಯಕ್ರಮವನ್ನು ನಡೆಸಲಾಯಿತು. ನಡೆಸಿದವರು ವಿ. ಸೀ. ಸಂಪದ –ವಿ. ಸೀ. ಸಂಸ್ಮರಣವೇದಿಕೆಯವರು. ಈ ಸಂದರ್ಭದಲ್ಲಿ ಶ್ರೀರಂಗರ ವೈಚಾರಿಕ ಲೇಖನ ಸಂಕಲನ ಗ್ರಂಥ (ಸಾಹಿತ್ಯ, ಸಂಸ್ಕೃತಿ ಮತ್ತು ಸಮಾಜ)ವನ್ನು ಅಧ್ಯಕ್ಷ ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಬಿಡುಗಡೆ ಮಾಡಿದರು.

ಕನ್ನಡ ಪುಸ್ತಕ ಪ್ರಾಧಿಕಾರವು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ 1994ನೇ ಸಪ್ಟೆಂಬರ್ 30ರಿಂದ ಒಂದು ವಾರದ ಕನ್ನಡ ಪುಸ್ತಕ ಮೇಳವನ್ನು ಏರ್ಪಡಿಸಿದ್ದಿತು. ಅದರ ಅಂಗವಾಗಿ ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ಚರ್ಚಾ ಸ್ಪರ್ಧೆ, ಪ್ರಬಂಧ ಸ್ಪರ್ಧೆಗಳು, ವಿದ್ವಾಂಸರಿಂದ ಕನ್ನಡ ಪುಸ್ತಕಲೋಕ ವಿಚಾರ ಸಂಕಿರಣ ಮುಂತಾದ ವಿವಿಧ ಕಾರ್ಯಕ್ರಮಗಳು ಪ್ರಭಾವಿಯಾಗಿ ನಡೆದುವು.

ನೊಳಂಬ ವೀರಶೈವ ಸಂಘ ಇವರು 1994ರ ಅಕ್ಟೋಬರ್ 16 ಮತ್ತು 17ರಂದು ಚಾರಿತ್ರಿಕ ವಿಚಾರ ಸಂಕಿರಣವನ್ನು ಯಶಸ್ವಿಯಾಗಿ ನಡೆಸಿದರು. ಸಂಕಿರಣದ ವಿಷಯ– ಮಹಾನಾಡು ಬಿಜ್ಜಾವರ, ಮಧುಗಿರಿ, ಮಿಡಿಗೇಶಿ ವೀರಶೈವ ಅರಸು ಮನೆತನಗಳು–ಇವುಗಳನ್ನು ಕುರಿತು ನಾಲ್ಕು ಗೋಷ್ಠಿಗಳು ಮತ್ತು ಉದ್ಘಾಟನಾ ಸಮಾರೋಪ ಸಮಾರಂಭಗಳು ನಡೆದುವು.

ಕಿಟ್ಟೆಲ್ ಶತಮಾನೋತ್ಸವ ಸಮಾರಂಭಗಳು ಮಂಗಳೂರು, ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತು (ನವೆಂಬರ್ 12-13ರಂದು), ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–ಈ ಸ್ಥಳಗಳಲ್ಲಿ ನಡೆದುವು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಿಟ್ಟೆಲ್ ಶತಮಾನೋತ್ಸವ ವಿಚಾರಸಂಕಿರಣದ ಅಂಗವಾಗಿ ಮೂರು ಗೋಷ್ಠಿಗಳುನಡೆದುವು. ವಿಷಯಗಳು–1. "ಭಾರತೀಯ ಭಾಷೆಗಳಲ್ಲಿ ನಿಘಂಟು ಪರಂಪರೆ"–ಸಮೀಕ್ಷೆ. 2. ರೆ|| ಫರ್ಡಿನೆಂಡ್ ಕಿಟ್ಟೆಲ್ ನಿಘಂಟು. 3. ಪರಿಷತ್ತಿನ ಕನ್ನಡ-ಕನ್ನಡ ನಿಘಂಟು :–ಒಂದು ಚರ್ಚೆ-ಇವನ್ನು ನಡೆಸಲಾಯಿತು.

ಧಾರವಾಡದಲ್ಲಿ ನಡೆದ 'ಕಿಟ್ಟೆಲ್' ಕನ್ನಡ-ಇಂಗ್ಲಿಷ್ ನಿಘಂಟು ಶತಮಾನೋತ್ಸವ' ಸಮಾರಂಭದ ಅಂಗವಾಗಿ ಅಂತರ್ರಾಷ್ಟ್ರೀಯ ವಿಚಾರ ಸಂಕಿರಣವನ್ನೂ ನಡೆಸಲಾಯಿತು.

ಮಂಗಳೂರಿನಲ್ಲಿ ಕುಂದಾಪುರ ತಾಲ್ಲೂಕು. ಕ. ಸಾ. ಪ. ಮತ್ತು ಮರವಂತೆಯ "ಸಾಧನಾ" ಜತೆಗೂಡಿ ಕಿಟ್ಟೆಲ್ ನಿಘಂಟು ಶತಮಾನೋತ್ಸವನ್ನು ನಡೆಸಲಾಯಿತು.

## ಪ್ರಶಸ್ತಿ ಪ್ರದಾನ :

1994ನೇ ನವೆಂಬರ್ 17 ರಂದು ಗೌರೀಬಿದನೂರು ಆಚಾರ್ಯಪಾಠಶಾಲೆಯಲ್ಲಿ ಕೋಲಾರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದಂತೆ ಪ್ರೊ|| ಎನ್. ಬಸವಾರಾಧ್ಯ ಅವರ ಸಮಗ್ರ ಸಾಹಿತ್ಯ ಸಮೀಕ್ಷೆ ಮತ್ತು ಶ್ರೇಷ್ಠ ಸಾಹಿತಿ ಪ್ರಶಸ್ತಿ ಪ್ರದಾನ ಸಮಾರಂಭಗಳು ಜರಗಿದುವು. ಪ್ರೊ. ಎಲ್. ಎಸ್. ಶೇಷಗಿರಿರಾಯರು ಪ್ರಶಸ್ತಿಪ್ರದಾನ, ಸನ್ಮಾನ ಮತ್ತು ಅಭಿನಂದನಾ ಭಾಷಣ ಮಾಡಿದರು.

18-11-94ರಂದು ತುಮಕೂರಿನ ಗುಬ್ಬಿ ವೀರಣ್ಣ ಕಲಾಕ್ಷೇತ್ರದಲ್ಲಿ ಬೆಂಗಳೂರಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ವತಿಯಿಂದ ಪುಸ್ತಕ ಬಹುಮಾನ–ಪ್ರಶಸ್ತಿ ಪ್ರದಾನ ಮತ್ತು 125 ಪುಸ್ತಕಗಳ ಬಿಡುಗಡೆಯ ಸಮಾರಂಭವು ಡಾ|| ಎಲ್. ಬಸವರಾಜು ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರಿಂದ ಪುಸ್ತಕ ಬಿಡುಗಡೆ ಮತ್ತು ಶ್ರೀ ಯಶವಂತ ಚಿತ್ತಾಲರಿಂದ ಪುಸ್ತಕ ಪ್ರದಾನಗಳು ನೆರವೇರಿದುವು.

ದಿನಾಂಕ 20-11-94ರಂದು ವಿಶ್ವೇಶ್ವರಪುರ ವೃತ್ತದಲ್ಲಿ ಸಾಹಿತಿ ಶ್ರೀ ಸನೋತನ ಹಳ್ಳಿ ರಾಮರಾಯರ ಸನ್ಮಾನ ಸಮಿತಿಯು ಅವರಿಗೆ 77 ವರ್ಷ ತುಂಬಿದ ಸಂದರ್ಭ ದಲ್ಲಿ ಕೃತಜ್ಞತಾಭಿನಂದನ ಕಾರ್ಯಕ್ರಮವನ್ನು ಏರ್ಪಡಿಸಿದ್ದಿತು. ನಿವೃತ್ತ ಸರ್ವೋಚ್ಚ

ನ್ಯಾಯಾಧೀಶ ಶ್ರೀ ಇ. ಎಸ್. ವೆಂಕಟರಾಮಯ್ಯನವರು ಅಧ್ಯಕ್ಷತೆ ವಹಿಸಿದ್ದರು. ನಿವೃತ್ತ ನ್ಯಾಯಮೂರ್ತಿ ಶ್ರೀ ನಿಟ್ಟೂರು ಶ್ರೀನಿವಾಸರಾಯರಿಂದ ಆಶೀರ್ವಚನ ನಡೆದುದಲ್ಲದೆ ಶ್ರೀ ರಾಮರಾಯರ 28ನೇ ಕೃತಿ 'ಶ್ರೀ ಕೃಷ್ಣಮಾನಸ"ವನ್ನು ಬಿಡುಗಡೆ ಮಾಡಲಾಯಿತು.

18-12-94ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದ ಸಭಾಂಗಣದಲ್ಲಿ ರಾಷ್ಟ್ರಕವಿ ಡಾ|| ಕು.ವೆಂ.ಪು. ಅವರ ಸಾಹಿತ್ಯವನ್ನು ಕುರಿತು ವಿಚಾರ ಸಂಕಿರಣವು ಏರ್ಪಟ್ಟಿದ್ದಿತು. ಶ್ರೀ ಜಿ. ನಾರಾಯಣ ಅವರಿಂದ ಉದ್ಘಾಟನೆ, ಡಾ|| ಜಿ. ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆ. ಅನಂತರ ಎರಡು ವಿಚಾರ ಗೋಷ್ಠಿಗಳಲ್ಲಿ ವಿದ್ವಾಂಸರ ಭಾಷಣ ಹಾಗೂ ಚರ್ಚೆಗಳು ನಡೆದುವು.

24, 25–12–1994ನೇ ದಿನಾಂಕಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ನ್ಯಾಷನಲ್ ಕಾಲೇಜು ಪರ್ವತಾರೋಹಣಸಂಸ್ಥೆಯು ರಾಜ್ಯಮಟ್ಟದ ಪ್ರಥಮ ಚಾರಣ ಸಾಹಿತ್ಯ ಸಮಾವೇಶವನ್ನು ನಡೆಸಿತು. ಈ ಕಾರ್ಯಕ್ರಮವು ಬಸವನಗುಡಿ ಬೆಂಗಳೂರು ನ್ಯಾಷನಲ್ ಕಾಲೇಜು ಆವರಣದಲ್ಲಿ ನಡೆಯಿತು.

**೩. ಅಖಿಲ ಭಾರತ 64ನೆಯ ಕನ್ನಡ ಸಾಹಿತ್ಯ ಸಮ್ಮೇಳನ :**

ಬಿಜಾಪುರ ಜಿಲ್ಲೆಯ ಮುಧೋಳದಲ್ಲಿ 1995ರ ಫೆಬ್ರವರಿಯಲ್ಲಿ ನಡೆಯಲಿರುವ ಸಾಹಿತ್ಯ ಸಮ್ಮೇಳನಕ್ಕೆ ಹಿರಿಯ ಜಾನಪದ ವಿದ್ವಾಂಸರಾದ ಡಾ|| ಎಚ್. ಎಲ್. ನಾಗೇಗೌಡ ಅವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿರುವುದಾಗಿ ಪರಿಷತ್ತು ಪ್ರಕಟಿಸಿದೆ. ಇವರು ಹೆಚ್ಚು ಸಂಖ್ಯೆಯ ಮೌಲಿಕ ಕೃತಿಗಳನ್ನು ರಚಿಸಿರುವರಲ್ಲದೆ ಕರ್ನಾಟಕ ಜಾನಪದ ಅಕಾಡೆಮಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಹಾಗೂ ರಾಮನಗರ ಸಮೀಪದ "ಜಾನಪದಲೋಕ"ವು ಇವರ ಭವ್ಯ ಸೃಷ್ಟಿ.



# ಪ್ರತಿಷ್ಠಾನ ವಾರ್ತೆ

## ೧. ಸಹೃದಯ ಗೋಷ್ಠಿ

30-7-94ರಂದು ಶ್ರೀ ಎಸ್. ಶ್ರೀಧರಮೂರ್ತಿ ಅವರು ಸ್ವರಚಿತಕವನಗಳನ್ನು ವಾಚನ ಮಾಡಿದರು. 30-8-94ರ ಸಂಜೆ ಶ್ರೀ ವೇಮಗಲ್ ಸೋಮಶೇಖರ್ ಅವರಿಂದ ಬೆಂಗಳೂರಿನ ವಸ್ತುಸಂಗ್ರಹಾಲಯದ ಹುಟ್ಟು ಹಾಗೂ ಬೆಳವಣಿಗೆ ಎಂಬ ವಿಷಯವನ್ನು ಕುರಿತು ವಿಚಾರಪೂರ್ಣ ಭಾಷಣ ನಡೆಯಿತು. 30–9–94ರಂದು ಸಂಜೆ ಶ್ರೀಯುತ ವಿದ್ವಾನ್ ಟಿ. ಕೇಶವ ಭಟ್ಟರು 'ನಿಘಂಟು ರಚನೆ'ಯ ಬಗ್ಗೆ ವಿಶೇಷ ಉಪನ್ಯಾಸ ನೀಡಿದರು. 25–10–94ರಂದು ಶ್ರೀಯುತ ಎನ್. ನಟರಾಜು ಮತ್ತು ಶ್ರೀಯುತ ಆನೆಕಲ್ ಕೃಷ್ಣಮೂರ್ತಿಕಾಟಿಯವರಿಂದ ಸ್ವರಚಿತ ಕವನಗಳ ವಾಚನ ಕಾರ್ಯಕ್ರಮ ನಡೆಯಿತು.

## ೨. ಬೆಳ್ಳೂರಿನಲ್ಲಿ ತಿಂಗಳ ಕಾರ್ಯಕ್ರಮ :

ದಿನಾಂಕ 21-8-94ರಂದು ಮಧ್ಯಾಹ್ನ 2–00 ಗಂಟೆಗೆ ಬೆಳ್ಳೂರಿನ ಬಿ. ಎಂ. ಶ್ರೀ ಭವನದಲ್ಲಿ 2ನೇ ತಿಂಗಳ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಶ್ರೀಕ್ಷೇತ್ರ ಆದಿಚುಂಚನಗಿರಿ ಮಹಾಸಂಸ್ಥಾನದ ಮಠಾಧೀಶರಾದ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ದಿವ್ಯಸಾನ್ನಿಧ್ಯದಲ್ಲಿ ಕಾರ್ಯಕ್ರಮಗಳು ನಡೆದುವು. ಪ್ರೊ|| ಹೆಚ್. ಆರ್. ದಾಸೇಗೌಡರು ಅಧ್ಯಕ್ಷತೆ ವಹಿಸಿದ್ದರು. ಪ್ರೊ|| ಜಿ. ಅಶ್ವತ್ಥ ನಾರಾಯಣ ಅವರಿಂದ "ಬಿ. ಎಂ. ಶ್ರೀ-ನನ್ನ ಅನುಭವ" ಎಂಬ ವಿಷಯವನ್ನು ಕುರಿತು ಭಾಷಣ ನಡೆಯಿತು. "ಬೆಳ್ಳೂರಿನ ಭಾಗ್ಯ" ಎಂಬ ಬಿ. ಎಂ. ಶ್ರೀ ಭವನದ ಉದ್ಘಾಟನಾ ಸಮಾರಂಭದ ಸಾಕ್ಷ್ಯ ಚಿತ್ರ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಇಡೀ ಕಾರ್ಯಕ್ರಮಕ್ಕೆ ಬೆಳ್ಳೂರಿನ ಹಾಗೂ ಸುತ್ತಮುತ್ತಲ ಮಹಾಜನರು ಆಗಮಿಸಿದ್ದು ಉತ್ಸುಕತೆಯಿಂದ ವೀಕ್ಷಿಸಿದರು. ಬಿ. ಎಂ. ಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಎನ್. ಬಸವಾರಾಧ್ಯರು ಪ್ರಾಸ್ತಾವಿಕ ಭಾಷಣ ಮಾಡಿ ಗಣ್ಯರನ್ನೂ ಮಹಾಜನರನ್ನೂ ಸ್ವಾಗತಿಸಿದರು.

## ೩. 'ಸಾಹಿತ್ಯೋಪಾಸಕರು' ಕಾರ್ಯಕ್ರಮಗಳು

ದಿನಾಂಕ 28–8–94ನೆಯ ಭಾನುವಾರ ಈ ವಿಶೇಷ ಕಾರ್ಯಕ್ರಮ ಮಾಲಿಕೆ ಯಲ್ಲಿ ೧೧ನೆಯ ಕಾರ್ಯಕ್ರಮ–"ಬಸವಪ್ಪ ಶಾಸ್ತ್ರಿ ಅವರ ಜೀವನ-ಸಾಧನೆ" ಗೋಷ್ಠಿ

ಸಾರ್ವಜನಿಕ ಸಂಸ್ಥೆಯ ಸಹಯೋಗದೊಂದಿಗೆ ನಡೆಯಿತು. ಕುವೆಂಪು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ|| ಎಂ. ಆರ್. ಗಜೇಂದ್ರಗಡ್ ಅವರು ಕಾರ್ಯಕ್ರಮದ ಉದ್ಘಾಟನೆಯನ್ನು ನೆರವೇರಿಸಿಕೊಡುತ್ತ ವಿಚಾರಪೂರ್ಣ ಭಾಷಣ ಮಾಡಿದರು. ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಮಧ್ಯಾಹ್ನ ನಡೆದ ವಿಚಾರಗೋಷ್ಠಿಯಲ್ಲಿ ಡಾ|| ವಿಜಯ ಸುಬ್ಬರಾಜ್ ಅವರು 'ಬಸವಪ್ಪ ಶಾಸ್ತ್ರಿಗಳ ಅನುವಾದಿತ ಕೃತಿಗಳು" ಎಂಬ ವಿಷಯವನ್ನು ಕುರಿತು ಹಾಗೂ ಶ್ರೀ ಆರ್. ಗಣೇಶ್ ಮತ್ತು ಎಂ. ವಿ. ವಿಶ್ವೇಶ್ವರ ಇವರುಗಳು ಬಸವಪ್ಪ ಶಾಸ್ತ್ರಿಗಳ "ಸಂಸ್ಕೃತ ಕೃತಿಗಳು" ಎಂಬ ವಿಷಯವನ್ನು ಕುರಿತು ತಮ್ಮ ವಿದ್ವತ್ಪೂರ್ಣ ಪ್ರಬಂಧಗಳನ್ನು ಮಂಡಿಸಿದರು. ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ್ದ ಪ್ರೊ|| ಸಿ. ಮಹಾದೇವಪ್ಪನವರು ಬಸವಪ್ಪ ಶಾಸ್ತ್ರಿಗಳನ್ನು ಕುರಿತು ಅವರ ಕೃತಿಗಳನ್ನು ಕುರಿತು ಪರಿಚಯಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಎನ್. ಬಸವಾರಾಧ್ಯರಿಂದ ಪ್ರಾಸ್ತಾವಿಕ ಭಾಷಣ ಮತ್ತು ಆಗಮಿಸಿದ್ದ ಗಣ್ಯರ ಹಾಗೂ ಶ್ರೋತೃಗಳ ಸ್ವಾಗತ ಹಾಗೂ ಕಾರ್ಯದರ್ಶಿಗಳಾದ ಶ್ರೀ ಜಿ. ಚನ್ನವೀರಸ್ವಾಮಿಯವರಿಂದ ಆಭಾರಮನ್ನಣೆಯೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

**೪. ಹಸ್ತಪ್ರತಿಶಾಸ್ತ್ರದ ಐದನೇ ತಂಡದ ತರಗತಿಯ ಉದ್ಘಾಟನಾ ಸಮಾರಂಭ.**

ಹಸ್ತಪ್ರತಿಶಾಸ್ತ್ರ ತರಗತಿಯನ್ನು ಡಾ|| ಎಂ. ಚಿದಾನಂದಮೂರ್ತಿ ಅವರು ಉದ್ಘಾಟಿಸಿ, ಹಸ್ತಪ್ರತಿಶಾಸ್ತ್ರ ತರಗತಿಗಳ ಉಪಯುಕ್ತತೆ, ಅದರ ಸ್ವರೂಪ ಹಾಗೂ ಅದರ ಅಧ್ಯಯನವನ್ನು ಕುರಿತು ಮಾತನಾಡಿ ತರಗತಿಯು ಯಶಸ್ವಿಯಾಗಲೆಂದು ಹಾರೈಸಿದರು. ಸಮಾರಂಭದ ಅಧ್ಯಕ್ಷತೆಯನ್ನು ರಾಜ್ಯ ಪತ್ರಾಗಾರ ಇಲಾಖೆಯ ನಿರ್ದೇಶಕರಾದ ಡಾ|| ಆರ್. ಮುನಿಸ್ವಾಮಿ ಅವರು ವಹಿಸಿದ್ದು ವಿದ್ಯಾರ್ಥಿಗಳಿಗೆ ಅಗತ್ಯವಾದ ಅನೇಕ ಮಾಹಿತಿಗಳನ್ನು ಕೊಟ್ಟು ಶುಭ ಕೋರಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ|| ಎನ್. ಬಸವಾರಾಧ್ಯರಿಂದ ವಂದನಾರ್ಪಣೆಯೊಡನೆ ಸಮಾರಂಭವು ಮುಕ್ತಾಯಗೊಂಡಿತು.

**೫. "ಕುವೆಂಪು ಸ್ಮರಣೆ" :**

ದಿನಾಂಕ 10-12-94ರಂದು ಸಂಜೆ ಬಿ. ಎಂ. ಶ್ರೀ ಪ್ರತಿಷ್ಠಾನ ಹಾಗೂ ಕುವೆಂಪು ಅಧ್ಯಯನ ಕೇಂದ್ರ ಮತ್ತು ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ ಇವರ ಸಹಯೋಗದಲ್ಲಿ ನೆರವೇರಿತು. ಡಾ|| ಜಿ. ಎಸ್. ಶಿವರುದ್ರಪ್ಪನವರು ಕಾರ್ಯಕ್ರಮವನ್ನು ಉದ್ಘಾಟಿಸಿ ಮಹಾಕವಿ ಕುವೆಂಪುರವರನ್ನು ಅವರ ರಾಮಾಯಣ ದರ್ಶನಂ ಮುಂತಾದ ಮುಖ್ಯ ಕೃತಿಗಳನ್ನು ಕುರಿತು ಪ್ರಾಸ್ತಾವಿಕ ಭಾಷಣ ಮಾಡಿದರು.

ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಅಧ್ಯಕ್ಷತೆ ವಹಿಸಿದ್ದು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಪ್ರೊ॥ ಅ. ರಾ. ಮಿತ್ರ ಅವರು 'ಕುವೆಂಪು ಅವರ ಮಹಾಕಾವ್ಯ' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಅಧ್ಯಕ್ಷ ಭಾಷಣ ಹಾಗೂ ವಂದನಾರ್ಪಣೆಗಳೊಂದಿಗೆ ಕಾರ್ಯಕ್ರಮವು ಮುಕ್ತಾಯವಾಯಿತು.

## ೬. ಸಂಸ್ಮರಣೆ

ದಿನಾಂಕ 12-12-94ರಂದು ಸಂಜೆ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಭಾಂಗಣದಲ್ಲಿ ಆ ಸಂಸ್ಥೆಯ ಸಹಕಾರದೊಂದಿಗೆ ದಿ॥ ಡಾ॥ ಸಿದ್ಧಯ್ಯ ಪುರಾಣಿಕರು ಮತ್ತು ದಿ॥ ಡಾ॥ ಎಚ್. ತಿಪ್ಪೇರುದ್ರಸ್ವಾಮಿ ಇವರುಗಳನ್ನು ಕುರಿತಂತೆ ಸಂಸ್ಮರಣ ಕಾರ್ಯಕ್ರಮವನ್ನು ಶ್ರೀ ನಿಟ್ಟೂರು ಶ್ರೀನಿವಾಸರಾವ್ ಇವರ ಅಧ್ಯಕ್ಷತೆಯಲ್ಲಿ ನೆರವೇರಿಸಲಾಯಿತು. ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯನವರು ಹಾಗೂ ಪ್ರೊ॥ ಡಿ. ಲಿಂಗಯ್ಯನವರೂ ಆ ಹಿರಿಯ ಚೇತನಗಳನ್ನು ಕುರಿತಂತೆ ಹೃದಯಸ್ಪರ್ಶಿಭಾಷಣಗಳನ್ನು ಮಾಡಿದರು. ವಂದನಾರ್ಪಣೆಯೊಂದಿಗೆ ಕಾರ್ಯಕ್ರಮವು ಮುಕ್ತಾಯವಾಯಿತು.

## ೭. ದತ್ತಿಉಪನ್ಯಾಸಗಳು

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಭಾಂಗಣದಲ್ಲಿ 25-12-94ನೇ ದಿನಾಂಕದಿಂದ ಕೆಳಕಂಡಂತೆ ದತ್ತಿ ಉಪನ್ಯಾಸಗಳು ಏರ್ಪಟ್ಟಿದ್ದುವು. 25-12-94 ರಂದು ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯವರಿಂದ "ಶೂನ್ಯ ಸಂಪಾದನೆಗಳು-ಒಂದು ಮರುಚಿಂತನೆ" ಎಂಬ ವಿಷಯದ ಮೇಲೆ ಚಂದ್ರಶೇಖರಶರ್ಮ ದತ್ತಿಉಪನ್ಯಾಸ, (2) 27-12-94ರಂದು ಪ್ರೊ॥ ಎಂ. ಜಿ. ನಾಗರಾಜ್ ಅವರಿಂದ ಕೊಡಗಿನ ರಾಜಮನೆತನಗಳು ಎಂಬ ವಿಷಯದ ಮೇಲೆ ಎಸ್. ಶ್ರೀಕಂಠಯ್ಯ ದತ್ತಿ ಉಪನ್ಯಾಸ, (3) 28-12-94ನೇ ದಿನಾಂಕ ಡಾ॥ ಬಿ. ನಂ. ಚಂದ್ರಯ್ಯ, ಮೈಸೂರು ಇವರಿಂದ 'ಆಧುನಿಕ ಕನ್ನಡ ಸಾಹಿತ್ಯ'ವನ್ನು ಕುರಿತು ವೆಂಕಟರಂಗಪ್ಪ ದತ್ತಿಉಪನ್ಯಾಸ, (4) 29-12-94ನೇ ಗುರುವಾರ ಡಾ॥ ಎಂ. ಎ. ಜಯಚಂದ್ರ ಅವರಿಂದ 'ಯುಗಧರ್ಮ ಮತ್ತು ಅತ್ತಿಮಬ್ಬೆ' ಎಂಬ ವಿಷಯವನ್ನು ಕುರಿತಂತೆ ಎಂ. ಆರ್. ಶ್ರೀ ದತ್ತಿ ಉಪನ್ಯಾಸ ಮತ್ತು (5) ದಿನಾಂಕ 31-12-94ರಂದು ಪ್ರೊ॥ ಜಿ. ಅಶ್ವತ್ಥನಾರಾಯಣ ಅವರಿಂದ 'ರಾಜರತ್ನಂರವರ ಸಾಹಿತ್ಯ ಸೇವೆ' ಎಂಬ ವಿಷಯದ ಮೇಲೆ ಜಿ. ಪಿ. ರಾಜರತ್ನಂ ದತ್ತಿ ಉಪನ್ಯಾಸ-ಈ ಕ್ರಮದಲ್ಲಿ ಕಾರ್ಯಕ್ರಮಗಳು ನಡೆದುವು.

# ಅಭಿನಂದನೆ

## ಗೌರವಸದಸ್ಯತ್ವ

ಶಾಂತಾದೇವಿಮಾಳವಾಡ ಅವರಿಗೆ ಕನ್ನಡಸಾಹಿತ್ಯ ಪರಿಷತ್ತು ನೀಡುವ ಅತ್ಯುನ್ನತ ಸ್ಥಾನವಾದ ಗೌರವಸದಸ್ಯತ್ವವನ್ನು ನೀಡಿ ಸತ್ಕರಿಸಿದೆ. ಇದು ಮಹಿಳಾ ಸಾಹಿತಿಯೊಬ್ಬರಿಗೆ ಸಂದಿರುವ ದೊಡ್ಡ ಗೌರವವಾಗಿದೆ. ಪ್ರೊ॥ ಮಾಳವಾಡ ಅವರ ಧರ್ಮಪತ್ನಿಯಾದ ಶಾಂತಾದೇವಿ ಅವರು ಪ್ರವಾಸ ಸಾಹಿತ್ಯ, ಮಕ್ಕಳ ಸಾಹಿತ್ಯ, ಶರಣಸಾಹಿತ್ಯ, ನಾಟಕ, ಕತೆ, ಕಾದಂಬರಿ ಜೀವನಚರಿತ್ರೆ ಮುಂತಾದ ಹಲವು ಪ್ರಕಾರಗಳಲ್ಲಿ ಸುಮಾರು 30ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಧಾರವಾಡ ಜಿಲ್ಲಾ ಸಾಹಿತ್ಯ ಸಮ್ಮೇಳನ (1984) ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ (1933)ಗಳ ಅಧ್ಯಕ್ಷ ಪದವಿಯ ಜೊತೆಗೆ ಹಲವಾರು ಗೌರವಗಳೂ ಅವರಿಗೆ ಸಂದಿವೆ. ಪರಿಷತ್ತು ತಾಮ್ರಪತ್ರ ನೀಡುವುದರ ಜೊತೆಗೆ ಅವರ ವಿವಿಧ ಕೃತಿಗಳ ಆಯ್ದ ಭಾಗಗಳನ್ನೊಳಗೊಂಡ ವಾಚಿಕೆ 'ಶಾಂತಾಕಿರಣ'ವನ್ನು ಪ್ರಕಟಿಸಿದೆ.

## ೧. ಭಾರತೀಯ ಜ್ಞಾನ ಪೀಠಪ್ರಶಸ್ತಿ

ಕನ್ನಡದಲ್ಲಿ ಕಥೆ-ಕಾದಂಬರಿ ರಚನೆಗಳಿಂದ ಖ್ಯಾತರಾದ ಹಿರಿಯ ನವ್ಯಸಾಹಿತಿ ಡಾ॥ ಯು. ಆರ್. ಅನಂತಮೂರ್ತಿಯವರಿಗೆ ೧೯೯೪ನೆಯ ವರ್ಷದ ಭಾರತೀಯ ಜ್ಞಾನಪೀಠ ಪ್ರಶಸ್ತಿ ಬಂದಿದೆ. ಈ ಅತ್ಯುನ್ನತ ಪ್ರಶಸ್ತಿಯನ್ನು ಈ ಮೊದಲು ಕುವೆಂಪು. ದ. ರಾ. ಬೇಂದ್ರೆ, ಶಿವರಾಮಕಾರಂತ, ಮಾಸ್ತಿ ಮತ್ತು ವಿ.ಕೃ. ಗೋಕಾಕ್ ಈ ಐವರು ಪಡೆದಿದ್ದು, ಇದೀಗ ಆರನೆಯ ಬಾರಿ ಕನ್ನಡಕ್ಕೆ ಬಂದಿರುವುದು ಅಭಿಮಾನಕರವಾಗಿದೆ.

ಸಂಸ್ಕಾರ, ಭಾರತೀಪುರ, ಅವಸ್ಥೆ ಮುಂತಾದ ಪ್ರತಿಷ್ಠಿತ ಕಾದಂಬರಿಗಳನ್ನು ಕೊಟ್ಟಿರುವ ಅನಂತಮೂರ್ತಿ ಶ್ರೇಷ್ಠಮಟ್ಟದ ವಿಮರ್ಶಕರೂ ಹೌದು.

ನವ್ಯಸಾಹಿತ್ಯದ ಪ್ರಾತಿನಿಧಿಕ ಪತ್ರಿಕೆಯಾದ 'ಋಜುವಾತು' ಅನ್ನು ಪ್ರಕಟಿಸುತ್ತಿರುವ ಅರವತ್ತೆರಡು ವರ್ಷ ಪ್ರಾಯದವರು ಕಥೆ, ಕಾದಂಬರಿ, ವಿಮರ್ಶೆ, ಪ್ರಬಂಧ, ಕಾವ್ಯ ಮುಂತಾದ ಪ್ರಕಾರಗಳ ಚಿಂತನಪರವಾದ ನವ್ಯಬರಹಗಾರರು; ವಿಶಿಷ್ಟರೂಪಗಳ ವೈವಿಧ್ಯಮಯ ಸಾಹಿತ್ಯಕಾರರು. ಪ್ರಾಧ್ಯಾಪಕರಾಗಿ, ಶಿಕ್ಷಣವೇತ್ತರಾಗಿ, ಕೇರಳದ ಮಹಾತ್ಮಾಗಾಂಧಿ ವಿಶ್ವವಿದ್ಯಾಲಯದ ಉಪಕುಲಪತಿಯಾಗಿ, ನೇಶನಲ್ ಬುಕ್‌ಟ್ರಸ್ಟಿನ ಅಧ್ಯಕ್ಷರಾಗಿ ಕೆಲಸ ಮಾಡಿರುವ ಇವರು ಈಗ ಕೇಂದ್ರ ಸಾಹಿತ್ಯ ಅಕಾಡೆಮಿಯ

ಅಧ್ಯಕ್ಷರೂ ಆಗಿರುತ್ತಾರೆ. ಇವರಿಗೆ ಇದೇ ವರ್ಷ (೫-೬-೧೯೯೪) ಡಾ|| ಮಾಸ್ತಿ ಪ್ರಶಸ್ತಿಯೂ ದೊರಕಿರುತ್ತದೆ.

### ರಾಜ್ಯಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು

ಕನ್ನಡ ಸಾಹಿತ್ಯಕ್ಕೆ ಗಮನಾರ್ಹವಾದ ಕೊಡುಗೆ ನೀಡಿದ ಇವರಿಗೆ ೧೯೯೪ನೆಯ ವರ್ಷದ ಗೌರವ ಪ್ರಶಸ್ತಿ'ಗಳನ್ನು (೧) ಶ್ರೀ ಗಿರೀಶ್ ಕಾರ್ನಾಡ್, (೨) ಪ್ರೊ|| ಎಂ. ಎಚ್. ಚನ್ನಯ್ಯ, (೩) ಶ್ರೀ 'ವೀ. ಚಿ.' (೪) ಡಾ|| ಹಂಪನಾ ಮತ್ತು (೫) ಪಂಚಾಕ್ಷರಿ ಹಿರೇಮಠ ಅವರಿಗೆ ನೀಡಲಾಗಿದೆ.

೧೯೯೩ನೆಯ ವರ್ಷದ ಅತ್ಯುತ್ತಮ ಸೃಜನ ಪ್ರಧಾನ ಕೃತಿಯಾಗಿ "ತಂತು" (ಡಾ|| ಎಸ್. ಎಲ್. ಭೈರಪ್ಪ) ಮತ್ತು ಅತ್ಯುತ್ತಮ ಚಿಂತನ ಪ್ರಧಾನ ಕೃತಿಯಾಗಿ "ಉರಿಯ ನಾಲಗೆ" (ಪ್ರೊ|| ಕೀರ್ತಿನಾಥ ಕುರ್ತುಕೋಟಿ) ಪುಸ್ತಕಗಳನ್ನು ಆಯ್ಕೆ ಮಾಡಲಾಗಿದ್ದು ಪ್ರತಿಯೊಂದು ಸಾಹಿತ್ಯಪ್ರಕಾರಗಳ ಒಂದೊಂದು ಕೃತಿ 'ಉತ್ತಮ ಪುಸ್ತಕ'ವೆಂದು ಸುಮಾರು 25 ಬಹುಮಾನಗಳನ್ನು ನೀಡಲಾಗಿದೆ.

### ರಾಜ್ಯೋತ್ಸವ ಪ್ರಶಸ್ತಿಗಳು

ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ೩೯ ಮಂದಿಗೆ ೧೯೯೪ನೆಯ ವರ್ಷದ ರಾಜ್ಯೋತ್ಸವ ಪ್ರಶಸ್ತಿಗಳನ್ನು ಕರ್ನಾಟಕ ಸರ್ಕಾರ ನೀಡಿ ಗೌರವಿಸಿದೆ. ಅವರಲ್ಲಿ ಪ್ರೊ|| ಎಸ್. ನಾರಾಯಣ ಶೆಟ್ಟಿ (ಸುಜನಾ), ಸೇಡಿಯಾಪು ಕೃಷ್ಣಭಟ್ಟ, ಡಾ|| ಎಲ್. ಬಸವರಾಜು ಮತ್ತು ಶ್ರೀ ಎಂ. ರಾಘವೇಂದ್ರರಾವ್ (ಗಮಕ), ಕೆಳದಿ ಗುಂಡಾ ಜೋಯಿಸ್ (ಸಂಶೋಧನೆ), ಮುಂತಾದವರೂ ಸೇರಿದ್ದಾರೆ.

### ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

ರಂಗಕಲಾವಿದರಾದ ಗಿರೀಶ್ ಕಾರ್ನಾಡ್ ಅವರ 'ತಲೆದಂಡ' ನಾಟಕಕ್ಕೆ ೧೯೯೪ನೆಯ ವರ್ಷದ ಪ್ರಶಸ್ತಿ ಪ್ರಾಪ್ತವಾಗಿದೆ. ಅವರು ಯಯಾತಿ, ತುಘಲಕ್ ಮುಂತಾದ ಪ್ರಮುಖ ನಾಟಕಗಳನ್ನು ರಚಿಸಿದ್ದಾರೆ. ತುಘಲಕ್ ಅತ್ಯಂತ ಮಹತ್ವಾಕಾಂಕ್ಷೆಯ ನಾಟಕವಾಗಿದ್ದು ಭಾರತೀಯ ರಂಗಭೂಮಿಗೆ ಹೊಸ ಆಯಾಮಗಳನ್ನು ಒದಗಿಸಿದೆಯಲ್ಲದೆ ದೇಶ ವಿದೇಶಗಳಲ್ಲಿಯೂ ಖ್ಯಾತಿ ಪಡೆದಿದೆ. ಕಾರ್ನಾಡರ ಅನಂತರದ ಮಹತ್ತ್ವದ ನಾಟಕವಾಗಿ 'ತಲೆದಂಡ' ಪ್ರಖ್ಯಾತಿಯನ್ನು ಪಡೆಯುತ್ತಿರುವ ಸಂದರ್ಭದಲ್ಲಿಯೇ ಈ ಪ್ರಶಸ್ತಿಯೂ ಸಂದಿದೆ.

# ಶ್ರದ್ಧಾಂಜಲಿ

## ಡಾ|| ಸಿದ್ಧಯ್ಯ ಪುರಾಣಿಕ

'ಕಾವ್ಯಾನಂದ' ಎಂಬ ಕಾವ್ಯನಾಮವುಳ್ಳ ಡಾ|| ಸಿದ್ಧಯ್ಯ ಪುರಾಣಿಕರು ದಿನಾಂಕ ೬-೯-೧೯೯೪ರಂದು ಬೆಂಗಳೂರಿನಲ್ಲಿ ವಿಧಿವಶರಾದರು. ಐ. ಎ. ಎಸ್. ಅಧಿಕಾರಿಗಳಾಗಿ ಸೇವೆಸಲ್ಲಿಸಿದ ದಿವಂಗತರು ಪ್ರಬುದ್ಧ ಸಾಹಿತಿಗಳೂ ಕವಿಯೂ ವಚನಕಾರರೂ ಒಳ್ಳೆಯ ವಾಗ್ಮಿಯೂ ಆಗಿದ್ದರು. ಬಸವ ಸಮಿತಿಯ ಬಸವಪಥ ಮತ್ತು ಬಸವ ಜರ್ನಲ್‌ಗಳ ಸಂಪಾದಕರಾಗಿಯೂ ಕೆಲವು ಕಾಲ ಸೇವೆ ಸಲ್ಲಿಸಿದ್ದರು. ಇವರ 'ಶರಣಚರಿತಾಮೃತ' ಶರಣರ ಕುರಿತಾದ ಸಣ್ಣ ವಿಶ್ವಕೋಶದಂತಿದೆ. 'ವಚನೋದ್ಯಾನ'ಕ್ಕೆ ಕಲ್ಕತ್ತೆಯ ಭಾರತೀಯ ಭಾಷಾ ಪರಿಷತ್ತಿನ 'ಭಿಲ್ವಾರಾ' ಪ್ರಶಸ್ತಿ ಬಂದಿದೆ. ಗುಲ್ಬರ್ಗದಲ್ಲಿ ೧೯೮೭ರಲ್ಲಿ ನಡೆದ ಅಖಿಲಭಾರತ ಕನ್ನಡ ಸಾಹಿತ್ಯದ ೫೭ನೆಯ ಸಮ್ಮೇಳನದ ಅಧ್ಯಕ್ಷ ರಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯ ಇವರಿಗೆ ಡಿ. ಲಿಟ್. ಪದವಿ ನೀಡಿದೆ. ಕನ್ನಡ ಸಾಹಿತ್ಯರಚನೆಯನ್ನು ಪ್ರೋತ್ಸಾಹಿಸಲು 'ಕಾವ್ಯಾನಂದ ಪುರಸ್ಕಾರ'ವನ್ನು ದಿವಂಗತರು ಸ್ಥಾಪಿಸಿರುತ್ತಾರೆ. ಸಿದ್ಧಯ್ಯ ಪುರಾಣಿಕರು ಪ್ರತಿಷ್ಠಾನದೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದರು ದಾನಿಸದಸ್ಯರಾಗಿದ್ದರು; ಇತ್ತೀಚೆಗಷ್ಟೆ ಗೌರವಸದಸ್ಯರೂ ಆಗಿ ಆಯ್ಕೆಯಾಗಿದ್ದರು. ಪ್ರತಿಷ್ಠಾನದ ಪುರೋಭಿವೃದ್ಧಿಯಲ್ಲಿ ಸಕ್ರಿಯವಾಗಿ ಸಹಕರಿಸುತ್ತಿದ್ದರು.

## ಡಾ|| ಎಚ್. ತಿಪ್ಪೆರುದ್ರಸ್ವಾಮಿ

ಕನ್ನಡದ ಹೆಸರಾಂತ ಸಂಶೋಧಕ, ವಿಮರ್ಶಕ, ಪ್ರಾಧ್ಯಾಪಕರಾದ ಇವರು ೨೮-೧೦-೧೯೯೪ರಂದು ನಿಧನರಾದರು. ಇವರು ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ನಿರ್ದೇಶಕರಾಗಿ ಸೇವೆಸಲ್ಲಿಸಿದ್ದರು. ೧೯೬೨ರಲ್ಲಿ ಇವರ 'ಪರಿಪೂರ್ಣದೆಡೆಗೆ' ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಿದೆ. 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಎಂಬ ಗ್ರಂಥಕ್ಕೆ ೧೯೬೮ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಲಭಿಸಿದೆ. ಕದಳಿಯ ಕರ್ಪೂರ, ಜ್ಯೋತಿ ಬೆಳಗುತಿದೆ, ವಿಜಯ ಕಲ್ಯಾಣ, ವಚನ ವಿರೂಪಾಕ್ಷ, ಜಡದಲ್ಲಿ ಜಂಗಮ,-ಮುಂತಾದ ವಚನಕಾರರನ್ನು ಕುರಿತ ವಿಶಿಷ್ಟ ಕಾದಂಬರಿಗಳನ್ನು ರಚಿಸಿದ್ದಾರೆ. "ತೌಲನಿಕ ಕಾವ್ಯ ಮೀಮಾಂಸೆ" (೧೯೮೫) ಇವರ ಶ್ರೇಷ್ಠ ಕೃತಿ. ಕಾದಂಬರಿಗಳು, ನಾಟಕಗಳು, ಕವನ

ಸಂಕಲನ, ಸಣ್ಣಕತೆ, ಮಹಾಪ್ರಬಂಧಗಳು, ಸಂಪಾದಿತಕೃತಿಗಳು, ಮಕ್ಕಳ ಸಾಹಿತ್ಯ-ಹೀಗೆ ಬಹುಮುಖ ಸಾಹಿತ್ಯ ಸೇವೆ ಇವರದಾಗಿದೆ.

## ರಾಷ್ಟ್ರಕವಿ ಕುವೆಂಪು

ಕನ್ನಡದ ರಸಋಷಿ, ರಾಷ್ಟ್ರಕವಿ, ಜ್ಞಾನಪೀಠಪ್ರಶಸ್ತಿವಿಜೇತ ಕುವೆಂಪು (ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ) ಇವರು ೧೦-೧೧-೧೯೯೪ರಂದು ಮೈಸೂರಿನ ಒಂಟಿಕೊಪ್ಪಲಿನಲ್ಲಿರುವ ತಮ್ಮ 'ಉದಯರವಿ' ನಿವಾಸದಲ್ಲಿ ಪರಂಧಾಮವನ್ನೈದಿದರು. ವಿಶ್ವಮಾನವ ಸಂದೇಶವನ್ನಿತ್ತ ಮಹಾಕವಿಯ 'ಶ್ರೀ ರಾಮಾಯಣ ದರ್ಶನಂ' ಈ ಶತಮಾನದ ಮೇರುಕೃತಿಯಾಗಿದ್ದು ಜ್ಞಾನಪೀಠ ಪ್ರಶಸ್ತಿಯೊಂದಿಗೆ ಹಲವು ಪ್ರಶಸ್ತಿಗಳನ್ನು ಪಡೆದಿದೆ. ಕಾವ್ಯ, ಕಥೆ, ಜೀವನ ಚರಿತ್ರೆ, ನಾಟಕ, ಕಾದಂಬರಿ, ವಿಮರ್ಶೆ, ಕಾವ್ಯಮೀಮಾಂಸೆ, ವೈಚಾರಿಕಲೇಖನ, ಮಕ್ಕಳ ಸಾಹಿತ್ಯ-ಹೀಗೆ ಸಾಹಿತ್ಯದ ಸಕಲ ಪ್ರಕಾರಗಳಲ್ಲಿ ಉನ್ನತ ಮಟ್ಟದ ರಚನೆಗಳನ್ನು ಮಾಡಿರುತ್ತಾರೆ. 'ಕಾನೂರು ಸುಬ್ಬಮ್ಮ ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು' ಇವರ ಬೃಹತ್ ಕಾದಂಬರಿಗಳು. ಇವರಿಗೆ ಪಂಪಪ್ರಶಸ್ತಿ, ಅಕಾಡೆಮಿ ಪ್ರಶಸ್ತಿಗಳು, ಪದ್ಮಭೂಷಣ, ಪದ್ಮವಿಭೂಷಣ, 'ಕರ್ನಾಟಕ ರತ್ನ' ಮುಂತಾದ ಪ್ರಶಸ್ತಿಗಳು ಅರಸಿ ಬಂದಿವೆ. ಮನುಜಮತ, ವಿಶ್ವಪಥ ಇವರ ಬಾಳಿನ ಸಂಕೇತ. ಮೊದಲು ಬೆಂಗಳೂರಿನ ವಿಶ್ವೇಶ್ವರಪುರದಲ್ಲಿದ್ದರು. ೧೯೪೫ರಲ್ಲಿ ಪ್ರಾಧ್ಯಾಪಕರಾಗಿ ಮೈಸೂರಿಗೆ ಬಂದರು. ೧೯೫೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದರು. ೧೯೫೭ರಲ್ಲಿ ಧಾರವಾಡದಲ್ಲಿ ನಡೆದ ಅಖಿಳಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಕಾನ್ಪುರ, ಗುಲ್ಬರ್ಗ, ಮಂಗಳೂರು ವಿಶ್ವವಿದ್ಯಾಲಯಗಳು ಕುವೆಂಪು ಅವರಿಗೆ ಗೌರವ ಡಾಕ್ಟರೇಟ್ ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ. 'ನೆನಪಿನ ದೋಣಿಯಲ್ಲಿ' (ಭಾಗ ೧,೨) ಅವರ ಆತ್ಮಕಥೆ.

ಅಗಲಿದ ಆತ್ಮಗಳಿಗೆ ಶಾಂತಿಯನ್ನು ಕೋರುತ್ತ, ಬಿ. ಎಂ. ಶ್ರೀ. ಪ್ರತಿಷ್ಠಾನ ತನ್ನ ಗೌರವಪೂರ್ವಕ ಶ್ರದ್ಧಾಂಜಲಿಯನ್ನು ಸಮರ್ಪಿಸುತ್ತದೆ.

# ಈ ಸಂಚಿಕೆಯ ಲೇಖಕರು

1. **ಗಮಕಿ ಆರ್. ಶಂಕರನಾರಾಯಣ್**
ಸತ್ಯಶ್ರೀ ಪ್ರಕಾಶನ, 67, ಐ.ಟಿ.ಐ. ಲೇಔಟ್,
ವಿದ್ಯಾಪೀಠ, ಬನಶಂಕರಿ 3ನೇ ಸ್ಟೇಜ್,
ಬೆಂಗಳೂರು-560 058

2. **ಟಿ. ಕೇಶವಭಟ್ಟ**
754, 15ನೇ ಮೈನ್, 2ನೇ ಹಂತ,
ಬನಶಂಕರಿ, ಬೆಂಗಳೂರು-560 070

3. **ಸಮೇತನಹಳ್ಳಿ ರಾಮರಾವ್**
ಕೋಟಿಮನೆ, 518, 4ನೇ ದೊಡ್ಡ ಬೀದಿ,
ಗೋಕುಲ, 3ನೇ ಹಂತ, ಮೈಸೂರು.

4. **ಸದ್ಯೋಜಾತಮೂರ್ತಿ**
ಜಯಶ್ರೀ ಗ್ರಂಥ ಪ್ರಸರಣಾಲಯ, 'ಅಭ್ಯುದಯ',
129, ವಿಶ್ವಕರ್ಮಕಾಲೋನಿ, ಗಾಯಿತ್ರಿಪುರಂ,
ಮೈಸೂರು-570 019.

5. **ಪ್ರೊ|| ಎಸ್. ಆರ್. ಮಳಗಿ**
281, 1ನೇ 'ಎನ್'ಬ್ಲಾಕ್, ರಾಜಾಜಿನಗರ,
ಬೆಂಗಳೂರು-560 010.

6. **ಡಾ|| ಉಪ್ಪಂಗಳ ರಾಮಭಟ್**
ಮುಖ್ಯಸ್ಥರು, ಕನ್ನಡ ವಿಭಾಗ,
ಎಂ.ಜಿ.ಎಂ. ಕಾಲೇಜು, ಉಡುಪಿ-576 102

7. **ಸೋಮಜೆ ಮಹಾಲಿಂಗಭಟ್**
ಪಿ. ಓ. ಪೆರ್ಲ-671 552.
ಕಾಸರಗೋಡು ಜಿಲ್ಲೆ

8. **ಶಶಿತನಯ**
ನಂ. 9, 3ನೇ ಮೈನ್, ಸರಸ್ವತಿಪುರಂ,
ಮೈಸೂರು-570 009

9. ಅತ್ತಿಮುರುಡು ವಿಶ್ವೇಶ್ವರ
50, 7ನೇ ಕ್ರಾಸ್, ಅಶೋಕನಗರ,
ಬೆಂಗಳೂರು-560 050

10. ಪ್ರೊ. ಗರ್ಗೇಶ್ವರಿ ವೆಂಕಟಸುಬ್ಬಯ್ಯ
20, 'ಗಣೇಶಧಾಮ' 2ನೇ ಕ್ರಾಸ್,
9ನೇ ಮೈನ್, ರಾಜಾಮಹಲ್ ವಿಲಾಸ ಬಡಾವಣೆ,
ಬೆಂಗಳೂರು-560 050.

11. ಎಸ್. ಎಲ್. ಶ್ರೀನಿವಾಸಮೂರ್ತಿ
ನಂ. 1827, ಸಾಂಬಶಂಕರ ರಸ್ತೆ,
ಕೋಲಾರ-563 101

12. ಪ್ರೊ|| ಸಿ. ಮಹದೇವಪ್ಪ
ರಿಸರ್ಚ್ ಕಾರ್ನರ್, 197ನೇ ಮುಖ್ಯರಸ್ತೆ,
ಬೆಂಗಳೂರು-560 003.

13. ಡಾ|| ಶ್ರೀಧರ್ ಎಚ್. ಜಿ.
ಕನ್ನಡ ವಿಭಾಗ, ವಿವೇಕಾನಂದ ಕಾಲೇಜು,
ಪುತ್ತೂರು, ದ. ಕ.-574203

14. ಎಸ್. ಶಿವಣ್ಣ
ಸಂಪಾದಕರು, ಕನ್ನಡ ಅಧ್ಯಯನ ಕೇಂದ್ರ,
ಬೆಂಗಳೂರು ವಿಶ್ವವಿದ್ಯಾಲಯ-560 056

15. ಡಾ|| ಡಿ. ವಿ. ಪರಮಶಿವಮೂರ್ತಿ
18/2, 15ನೇಕ್ರಾಸ್, 'ಎ' ಬ್ಲಾಕ್,
ಭುವನೇಶ್ವರಿ ನಗರ, ಮಾಗಡಿರಸ್ತೆ,
ಬೆಂಗಳೂರು-560 023.

16. ಎಂ. ಜಿ ವಾರಿ
ಬಾಣದಾರ ಓಣಿ, ಬಾದಾಮಿ-587 201.

## ಪ್ರತಿಷ್ಠಾನದ ಗೌರವ ಸದಸ್ಯರು

1) ಡಾ|| ಕುವೆಂಪು, 2) ಪ್ರೊ|| ಎ. ಎನ್. ಮೂರ್ತಿರಾವ್ 3) ಡಾ||ಪು.ತಿ.ನ. 4) ವಿದ್ವಾನ್ ಸೇಡಿಯಾಪು ಕೃಷ್ಣಭಟ್ಟ 5) ಪ್ರೊ|| ಎಸ್. ವಿ. ಪರಮೇಶ್ವರಭಟ್ಟ 6) ಪ್ರೊ|| ತ. ಸು. ಶಾಮರಾವ್ 7) ಡಾ|| ಜಿ. ಎಸ್. ದೀಕ್ಷಿತ್ 8) ಡಾ|| ಜಿ ಎಸ್. ಗಾಯಿ.

## ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಕಳಿಸಬೇಕು

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ. ಆದರೆ, ಕಳಿಸಿದರೆ ವೈಶಿಷ್ಟ್ಯವುಳ್ಳ ಅಂಥ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

## ವಿನಿಮಯ ಪತ್ರಿಕೆಗಳು

1) ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ವಿಜ್ಞಾನ ಕರ್ನಾಟಕ, ಮೈಸೂರು 2) ಸಾಧನೆ, ಬೆಂಗಳೂರು 3) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು. 4) ಮಿಥಿಕ್ ಸೊಸೈಟಿ ಜರ್ನಲ್, ಬೆಂಗಳೂರು. 5) ಬಸವ ಪಥ, ಬೆಂಗಳೂರು. 6) ಶಂಕರಭಾಸ್ಕರ, ಬೆಂಗಳೂರು. 7) ಧರ್ಮಪ್ರಭ, ಬೆಂಗಳೂರು. 8) ಜಾನಪದ ಜಗತ್ತು, ಬೆಂಗಳೂರು. 9) ಅನ್ವೇಷಣೆ, ಬೆಂಗಳೂರು. 10) ಅಪರಂಜಿ, ಬೆಂಗಳೂರು 11) ಕರ್ನಾಟಕ ಭಾರತಿ, ಧಾರವಾಡ. 12) ಸುಗುಣಮಾಲಾ, ಉಡುಪಿ. 13) ಸತ್ಯಶುದ್ಧ ಕಾಯಕ, ಸಿರಿಗೆರೆ. 14) ತರಳಬಾಳು, ಸಿರಿಗೆರೆ. 15) ಅಭಿಮತ, ದೆಹಲಿ.

## ಕರ್ನಾಟಕ ಲೋಚನ ಚಂದಾ ವಿವರ

ವಾರ್ಷಿಕ ಚಂದಾ : ವ್ಯಕ್ತಿಗಳಿಗೆ ರೂ. 15-00
ಗ್ರಂಥಾಲಯ, ಸಂಘ ಸಂಸ್ಥೆಗಳಿಗೆ ರೂ. 25-00
ಆಜೀವ : ರೂ. 150-00

**ಪ್ರತಿಷ್ಠಾನದ ಸದಸ್ಯರಿಗೆ ಲೋಚನ ಉಚಿತ**

ಪ್ರತಿಷ್ಠಾನದ ಸದಸ್ಯತ್ವ : ವಾರ್ಷಿಕ ರೂ. 25-00 ಆಜೀವ ರೂ. 250-00
ಬಿಡಿ ಪ್ರತಿ : ರೂ. 10-00

KARNATAKA LOCHANA Half Yearly Journal, Published by B. M. Sri. Smaraka Prathishthana, 54, M. V. Seetharamaiah Road, Masthi Nagara, (Gavipuram Extension), Bangalore-19.
Printed by : Prabhu Mudrana, Bangalore-78 Ph : 6640976

Reg. No. 03260/23/2/ALTC/88 KARNATAKA LOCHANA

# ಪ್ರತಿಷ್ಠಾನದ ಈಚಿನ ಪ್ರಕಟಣೆಗಳು

| | | ಉತ್ತಮ | ಸಾದಾ |
|---|---|---|---|
| 1. | ಸಂಗಮರ ಕಾಲದ ವಿಜಯನಗರ | | 75–00 |
| 2. | ಕುಮಾರವ್ಯಾಸ ಭಾರತ ಸಂಗ್ರಹ | 75–00 | 40–00 |
| 3. | ಕಾವ್ಯ-ಇತಿಹಾಸ (ದತ್ತಿ ಉಪನ್ಯಾಸಗಳು) | | 10–00 |
| 4. | ಶಂಬಾ ಕೃತಿ ಸಮೀಕ್ಷೆ | | 35–00 |
| 5. | ಎಂ. ವಿ. ಸೀ. ಸಂಸ್ಮರಣೆ | | 25–00 |
| 6. | ವೈಚಾರಿಕ ಜಾಗೃತಿ | | 15–00 |
| 7. | ಹಸ್ತಪ್ರತಿಶಾಸ್ತ್ರ ಪರಿಚಯ | | 15–00 |
| 8. | ಸಂವಿಧಾನ ಮತ್ತು ಕಾನೂನು | | 20–00 |
| 9. | ಮಾಸ್ತಿ ಕಥಾ ಸಮೀಕ್ಷೆ | | 20–00 |
| 10. | ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಜೀವನ ಚರಿತ್ರೆ) | | 15-00 |
| 11. | ಬಸವಪ್ಪ ಶಾಸ್ತ್ರಿಗಳು | | 25-00 |
| 12. | ಕವಿರಾಜಮಾರ್ಗ (ಎಂ.ವಿ.ಸೀ. ಸಮಗ್ರ ಸಾಹಿತ್ಯ–2) | 100-00 | 80-00 |
| 13. | ಕದಂಬ (ಎಂ.ವಿ.ಸೀ. ಸಮಗ್ರ ಸಾಹಿತ್ಯ–1, ಸಮಗ್ರ ಸಂಶೋಧನಾ ಲೇಖನಗಳು) | | |

## ಸಿದ್ಧತೆಯಲ್ಲಿ

1. ತೌಲನಿಕ ಸಾಹಿತ್ಯ
2. ಸಾಹಿತ್ಯ ಮತ್ತು ಮನಶ್ಶಾಸ್ತ್ರ
3. ಶಾಸನ ಪದ್ಯ
4. ದತ್ತಿ ಉಪನ್ಯಾಸಗಳು
5. ತಿರುಕ್ಕುರಳ್ (ಕನ್ನಡಾನುವಾದ)
6. ನವ್ಯಸ್ಫೂರ್ತಿ (ಗೋಕಾಕ್ ಸಾಹಿತ್ಯ ಸಮೀಕ್ಷೆ)
7. ಪದ್ಮಿನಿ ಕಲ್ಯಾಣ (ಸಂಪಾದಿತ)
8. ರೆ|| ಎಫ್. ಕಿಟೆಲ್
9. ಎಂ. ಆರ್. ಶ್ರೀನಿವಾಸಮೂರ್ತಿಗಳು
10. ಸಾಹಿತ್ಯೋಪಾಸಕರು